

**ಮುಖಪುಟ**


**ಪ್ರಧಾನ ಸಂಪಾದಕರು**
ಚನ್ನಪ್ಪ ಎರೇಸೀಮೆ

**ಸಂಪಾದಕರು**
ಹೆಚ್. ವಿ. ವೀರಭದ್ರಯ್ಯ

**ಸಹ ಸಂಪಾದಕರು**
ಎಚ್. ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

**ಸಲಹಾ ಸಮಿತಿ**
ಡಾ. ಎಂ.ಎಸ್. ಚನ್ನಬಸಪ್ಪ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಟಿ. ಕೆ. ನಂಜುಂಡಪ್ಪ
ಎಚ್.ಎಸ್. ನರಸಿಂಹ ಜೀಯರ್
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಚಪ್ಪ
ಬಿ.ಎಸ್. ಪುಟ್ಟಶಂಕರಯ್ಯ
ಬಿ. ಎಸ್. ಪರಮಶಿವಯ್ಯ

**ಸದಸ್ಯರು**
ಕೆ.ಎಸ್. ಶಂಕರಯ್ಯ
ಸಿ. ಎಸ್. ಸಿದ್ಧಲಿಂಗಯ್ಯ
ಪಿ. ವಿ. ಮಚ್ಚವೀರಯ್ಯ
ಕೆ. ಸಿ. ಶಿವಗಂಗಯ್ಯ
ಎಸ್. ವಿಶ್ವನಾಥ್
ಬಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

**ಪ್ರಕಾಶಕರು**
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104


**ಹಿಂಬದಿ ಪುಟ**
ಶ್ರೀ ಮಠದಲ್ಲಿ ಪ್ರತಿನಿತ್ಯ ನಡೆಯುವ ಸಾಮೂಹಿಕ ಪ್ರಾರ್ಥನೆ


**ಮುದ್ರಕರು :**
ಗೀತಾಂಜಲಿ ಪ್ರಿಂಟರ್ಸ್, ನಂ. ೫,
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೪೦೮೭




॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

**ಸಂಪುಟ : ೩೪ ಜುಲೈ ೧೯೯೮ ಸಂಚಿಕೆ : ೭**

## ಒಳಪುಟಗಳಲ್ಲಿ ......




| **ವಿಳಾಸ :** | **ಚಂದಾ ವಿವರ :** |
|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ, | ವಾರ್ಷಿಕ ಚಂದಾ ರೂ. ೫೦. |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ ರೂ. ೫೦೦. |
| ತುಮಕೂರು ಜಿಲ್ಲೆ-೫೭೨ ೧೦೪ | ಬಿಡಿ ಪ್ರತಿ ರೂ. ೫.00 |


**ಸಾಹಿತ್ಯ, ಕಲೆ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ ಮೊದಲಾದ ಲೇಖನಗಳಿಗೆ ಸ್ವಾಗತವಿದೆ.**



## ಸಂಪಾದಕೀಯ.....

"ನಿಮ್ಮ ಕಡೆ ಮಳೆ ಹೇಗೆ?" ಶ್ರೀಗಳವರು ಶ್ರೀಮಠಕ್ಕೆ ಬಂದ ಗ್ರಾಮೀಣ ಬಂಧುಗಳನ್ನು ಕೇಳುತ್ತಾರೆ. "ಎಲ್ಲಿಯ ಮಳೆ ಬಿಡಿ ಬುದ್ಧಿ, ದನಕರುಗಳಿಗೆ ಕುಡಿಯಲು ನೀರಿಲ್ಲ, ಅವು ಬಿಡುವ ನಿಟ್ಟುಸಿರು ನೋಡುವುದಕ್ಕಾಗುವುದಿಲ್ಲ" - ಎನ್ನುತ್ತಾರೆ ಬಂದವರು. "ಪ್ರಸಾದವಾಯಿತೆ?" ಮರು ಮಾತು ಶ್ರೀಗಳಿಂದ. "ಆಯಿತು ಬುದ್ಧಿ ನಿಮ್ಮ ದಯದಿಂದ. ಇಂದು ನಮ್ಮ ಮನೆಗೆ ಯಾರಾದರೂ ನೆಂಟರು ಬಂದರೆ, ಯಾಕಪ್ಪಾ ಬಂದರು ಎನಿಸುತ್ತದೆ. ಅಂಥಾದ್ರಲ್ಲಿ ಅದು ಹೇಗೆ ಇಷ್ಟೊಂದು ಸಾವಿರ ಮಕ್ಕಳಿಗೆ ಅನ್ನ ನೀಡುತ್ತೀರಿ ಎಂಬುದೇ ನಮಗೆ ಸೋಜಿಗ"ವೆನ್ನುತ್ತಾರೆ. ಶ್ರೀಗಳವರ ಉತ್ತರ ತುಂಬು ಮೌನ.

ಕೆಲವೆಡೆ ಮಳೆ ಬಿದ್ದಿದೆ. ಅನಾಹುತವೂ ಆಗಿದೆ. ಬಹುಕಡೆ ಮಳೆಯಿಲ್ಲದೆ ರೈತಾಪಿ ಬಂಧುಗಳು ಕಂಗೆಟ್ಟಿದ್ದಾರೆ. ಪಾತ್ರೆ-ಪರಡಿಗಳನ್ನು ಗಿರವಿಯಿಟ್ಟು ಗಂಜಿ ಕುಡಿಯುತ್ತಿದ್ದಾರೆ. ಮಕ್ಕಳ ವಿದ್ಯಾಭ್ಯಾಸಕ್ಕಾಗಿ ತಾಯಂದಿರು ಮೈಮೇಲಿನ ಒಡವೆಗಳನ್ನು ಮಾರುತ್ತಿದ್ದಾರೆ. ನಗರ, ಪಟ್ಟಣವಾಸಿಗಳಿಗೆ ಬಿಸಿ ಅಷ್ಟಾಗಿ ತಟ್ಟದಂತೆ ಕಾಣದು. ಆದರೆ ಹಳ್ಳಿಗರ ಗೋಳು ಹೇಳತೀರದು. ಕಳ್ಳತನಗಳು ವಿಜೃಂಭಿಸಿವೆ. ನಾಗರಿಕರು ತಲ್ಲಣಗೊಂಡಿದ್ದಾರೆ. ರೂಪಾಯಿ ನಾಣ್ಯದಗಲದ ಒಂದು ಇಡ್ಲಿಗೆ ಒಂದೂವರೆ ರೂಪಾಯಿಯಾಗಿದೆ. ಒಂದು ಗುಟುಕು ಕಾಫಿ ಬೆಲೆ ಮೂರು ರೂಪಾಯಿ. ಮಧ್ಯಮವರ್ಗದವರ ಬವಣೆ ಅಷ್ಟಿಷ್ಟಲ್ಲ. ಮರ್ಯಾದೆ-ಆರ್ಥಿಕ ದುಸ್ಥಿತಿಯ ಮಧ್ಯೆ ಬಜ್ಜಿಯಾಗುತ್ತಿದ್ದಾರೆ.

ಆದರೇನು ಆಳುವ ಪ್ರಭುಗಳ ಜೀವನಧಾಟಿ ಬದಲಾಗಿಲ್ಲ. ಅಧಿಕಾರಿಗಳ ಆಡಳಿತದ ಶೈಲಿ ಭ್ರಷ್ಟಮುಕ್ತವಾಗಿಲ್ಲ. ಜಿಲ್ಲಾ ಮಟ್ಟದ, ತಾಲ್ಲೂಕು ಮಟ್ಟದ ಆಡಳಿತ ಯಂತ್ರಗಳೆಲ್ಲ ಲಂಚಮಯವಾಗಿವೆ. ಜನ ಬಾಡುತ್ತಿದ್ದಾರೆ, ಬೇಯುತ್ತಿದ್ದಾರೆ, ಹೊಟ್ಟೆಯ ಸಿಟ್ಟು ರಟ್ಟೆಗೆ ಬರಲಾರದೆ ನಿತ್ರಾಣರಾಗುತ್ತಿದ್ದಾರೆ. ಇನ್ನೆಷ್ಟು ಕಾಲ ಹೀಗೇ ಬದುಕಬೇಕೋ ತಿಳಿಯದು.

-- **ಸಂಪಾದಕರು**





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಗುರುವೆ ನೀ ಬೈದರೆ ಆಶೀರ್ವಾದವೆಂಬೆ
ಹೊರೆಯೆ ನೀ ಹೊನ್ನಿನಾ ಮಳೆಯೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಏಕಾಂತದಲಿ ಧ್ಯಾನ ಲೋಕಾಂತದಲಿ ಸೇವೆ
ಏಕಮಾಡಿಹೆ ಗುರುವೆ ಇಹ-ಪರವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಲಿಂಗಪತಿಯನುತಬ್ಬಿ ಶರಣ ಸತಿಯಾಗಿರುವೆ
ಅಂಗೈಯ್ಯಲಿಂಗನೊಳು ಬೆರೆದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಕಳ್ಳನಿಗು ಮರುಗುವೆ ಸುಳ್ಳನಿಗು ಮರುಗುವೆ
ಮಳ್ಳನಿಗು ಮರುಗುವೆ ಶ್ರೀಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಆಧ್ಯಾತ್ಮ ಆಧ್ಯಾತ್ಮ ನೀನರಿತ ಆಧ್ಯಾತ್ಮ
ಕಣ್ಣೀರ ನೊರೆಸುವುದೆನೊಂದವರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಪರಿಶುದ್ಧ ಪ್ರಸಾದ ಪರಿಪೂರ್ಣ ರೂಪವೆ
ಅರಿವೆ ನಿರಂಜನವಾಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಮಾಡಿದೆ ಅಗಣಿತ ನೀಡಿದೆ ಅಗಣಿತ
ಮಾಡಿನೀಡಿದೆನೆಂಬ ನಿರ್ಭಾವಿ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಮುಪ್ಪಿನಾರ್ಯರ ವಾಣಿ ಸಾಕಾರವಾದಂತೆ
ಒಪ್ಪಿರುವೆ ಜಗದೊಳಗೆ ಎಲ್ಲರಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಎಲ್ಲಿಂದ ಬಂದೆಯೋ ಯಾವ ಲೋಕದ ಸಿರಿಯೋ
ಚೆಲ್ಲಿರುವೆ ಎಲ್ಲೆಡೆಗೆ ಶಿವಬೆಳಕ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಲೋಕದೆಲ್ಲಾ ಶೀಲ ಆಕಾರತಳೆದಂತೆ
ಶ್ರೀಕಾರವಾಗಿ ನಗುತಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

-- **ಹೆಚ್. ವಿ. ವೀರಭದ್ರಯ್ಯ**



## ಶ್ರೀ ವಾಣಿ

ಜಗತ್ತಿನ ಇತಿಹಾಸದಲ್ಲಿ 12ನೆಯ ಶತಮಾನ ಬೆಳಕಿನ ಯುಗ. ಅದಕ್ಕೆ ಕಾರಣನಾದವನು ಬಸವಣ್ಣ. ಆ ಮಹಾನುಭಾವನ ವಿಚಾರಧಾರೆ ಎಂದೆಂದಿಗೂ ಪ್ರಸ್ತುತ. ಕಾಲ-ದೇಶಗಳನ್ನು ಗೆದ್ದು ನಿಂತಿವೆ ಬಸವತತ್ವಗಳು. ಅವು ನಿತ್ಯನೂತನ; ಸತ್ಯದರ್ಶನವಾಗಿವೆ. ಶತ ಶತಮಾನಗಳಿಂದ ಹೆಪ್ಪುಗಟ್ಟಿದ್ದ ಚಿಂತನೆಗಳನ್ನು ಕಡೆದು ನವನೀತ ತೆಗೆದ ವಿಚಾರಶೀಲ ಬಸವಣ್ಣ ಮಾಡಿದ ಮಹೋನ್ನತ ಬದಲಾವಣೆ ಜನ ಜಾಗೃತರಾಗುವಂತೆ ಮಾಡಿದ್ದು. ಜನರನ್ನು ತಿದ್ದುವ ಮಹಾಮಣಿಹದಲ್ಲಿ ಅರ್ಪಣಾ ಮನೋಭಾವದಿಂದ ಕ್ರಿಯಾಶೀಲನಾದ ಕರ್ಮಚಾರಿ, ಆಚಾರ್ಯಶ್ರೇಷ್ಠ, ಸಮಾಜ ವಿಜ್ಞಾನಿ, ರಾಜಕೀಯ ದಾರ್ಶನಿಕ ಬಸವಣ್ಣ ಪ್ರಜಾಪ್ರಭುತ್ವವಾದಿ.

ಜಗತ್ತಿನಲ್ಲಿದ್ದ ಗುಲಾಮ ಪದ್ಧತಿಯನ್ನು ಕಾಯಕ ತತ್ವದ ಮೂಲಕ ನಿವಾರಿಸಿದ ನಿರ್ಮಲ ಚಿತ್ತನಾದ ಬಸವಣ್ಣ ಮಾನವತೆಗೆ ಮಾಡಿದ ಮಹೋಪಕಾರ. ಸಂತೆಗಳಲ್ಲಿ ಎತ್ತು, ಕತ್ತೆ, ಕುರಿ, ಕೋಳಿಗಳನ್ನು ಮಾರುವಂತೆ ಜನರನ್ನೂ ಮಾರುವ ಅಮಾನುಷ ಸಂಪ್ರದಾಯವನ್ನು ಬುಡಮೇಲು ಮಾಡಿದ ಸಮಾಜ ದ್ರಷ್ಟಾರ. 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ' ಎಲ್ಲರೂ ಸಮಾನರೆಂದುದಲ್ಲದೆ ಆಚರಣೆಗೆ ತಂದ ನಿಸ್ಸೀಮ ಧೈರ್ಯಮೇರು ಬಸವಣ್ಣ. ಜನಶಕ್ತಿ ಚಾಲನವಾಗುವಂತೆ ಪವಾಡ ಮಾಡಿದ ಬಸವಣ್ಣ ರಾಜಸತ್ತೆಗಿಂತ ಪ್ರಜಾಸತ್ತೆ ಶ್ರೇಷ್ಠವೆಂಬುದನ್ನು ಅತ್ಯಂತ ಮಾರ್ಮಿಕವಾಗಿ ಲೋಕವಿಧಿತಗೊಳಿಸಿದ.

ಪ್ರಜೆಗಳು ಒಳ್ಳೆಯವರಾಗದ ಹೊರತು ಪ್ರಜಾ ಪ್ರತಿನಿಧಿಗಳು ಒಳ್ಳೆಯವರಾಗಲಾರರು ಎಂಬುದನ್ನು ತಿಳಿಸಿದ ಬಸವಣ್ಣ ದೀನ-ದಲಿತರ ಏಳ್ಗೆಗಾಗಿ ತನ್ನನ್ನೇ ತಾನು ಅರ್ಪಿಸಿಕೊಳ್ಳಲೂ ಹಿಂಜರಿಯಲಿಲ್ಲ. ಅರವಿಂದರು, ಮಹಾತ್ಮ ಗಾಂಧೀಜಿ, ಅಂಬೇಡ್ಕರರು ಬಸವಣ್ಣನವರ ತತ್ವ ಪರಿಚಯ ತಮಗಾದದ್ದು ತಮ್ಮ ಕೊನೆಯ ದಿನಗಳಲ್ಲಿ ಎಂದು ವ್ಯಥೆಪಟ್ಟಿದ್ದು ನಮ್ಮ ಕಣ್ತೆರೆಸಬೇಕು.

[4.7.98ರಂದು ಎಸ್.ಐ.ಟಿ.ಯಲ್ಲಿ ಬಸವ ಜಯಂತಿಯಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ]



# ಶ್ರೀ ಸಿದ್ಧಲಿಂಗೇಶ್ವರ ವಚನ

ದನುಜ, ಮನುಜ, ದಿವಿಜರ ಅಲ್ಪಪದವಿಯನೇನೆಂದು ಅರಿಯನು
ನೋಡಾ ಶರಣನು!
ಮನು ಮುನಿಗಳ ಕ್ಷಣಿಕ ಪದವಿಗಿದವಿ ಬಗೆವನೆ ನಿಃಕಾಮಿ ಶರಣನು?
ಕಾಮಧೇನು ಗೀಮಧೇನು ಕಲ್ಪತರು ಗಿಲ್ಪತರು ಚಿಂತಾಮಣಿ
ಗಿಂತಾಮಣಿ
ಪರುಷಗಿರಿಗಳೆಂಬ ಪ್ರಪಂಚುಗಳ ಎಣಿಸುವನೆ ನಿಭ್ರಾಂಶ ಶರಣನು?
ಇಹಲೋಕದ ಸುಖ, ಪರಲೋಕದ ಗತಿಯೆಂಬ
ಇಹಪರವನೆಣಿಸುವನೆ ಶರಣನು?
ಇಹಪರವೆಂಬ ಇದ್ದೆಸೆಗೆಟ್ಟು, ಪರಾಪರವೆಂಬ ಇದ್ದೆಸೆಗೆಟ್ಟು
ಪರಾಪರವಸ್ತುವೆ ತಾನಾದ ಪರಮ ಪರಿಣಾಮಿ ನೋಡಾ ಶರಣನು.
ಮಹಾಲಿಂಗ ಗುರು ಶಿವಸಿದ್ಧೇಶ ಪ್ರಭುವೇ!

ಶರಣಸ್ಥಲದ ಪದವಿಯ ಮುಂದೆ ಸ್ವರ್ಗ, ಮರ್ತ್ಯ ಪಾತಾಳಲೋಕದಲ್ಲಿರುವ ಯಾವ ಪದವಿಗಳೂ ದೊಡ್ಡವಾಗಿ ಕಾಣುವದಿಲ್ಲ. ಮನುಮುನಿಗಳು ಬಯಸಿ ಪಡೆಯುವ ಯಾವ ಪದವಿಗಳ ಬಗೆಗೂ ಶರಣನಿಗೆ ಇಚ್ಛೆಯುಂಟಾಗುವುದಿಲ್ಲ. ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ, ಪರುಷಗಿರಿ ಮೊದಲಾದವುಗಳ ವಿಷಯದಲ್ಲಿಯೂ ಶರಣನಿಗೆ ಭ್ರಾಂತಿಯಿರುವುದಿಲ್ಲ ಮತ್ತು ಶರಣನಲ್ಲಿ ಈ ಲೋಕ ಪರಲೋಕ ಎಂಬ ಭೇದ ಭಾವನೆಯೇ ಉಂಟಾಗುವುದಿಲ್ಲ. ಈತನು ಪರಮಾನಂದ ಸ್ವರೂಪಿಯಾದ ಪರತತ್ವವೇ ಆಗಿರುವುದರಿಂದ ಇದಕ್ಕಿಂತ ಹೆಚ್ಚಿನ ಯಾವುದೂ ಈತನ ದೃಷ್ಟಿಯಲ್ಲಿರುವುದಿಲ್ಲ. ಯಾವುದನ್ನೂ ಹೊಂದಿದ ಮೇಲೆ ಅದಕ್ಕಿಂತ ಮತ್ತೊಂದು ಹೆಚ್ಚಿನದಿರುವುದೆಂಬ ಭಾವನೆಯುಂಟಾಗುವುದೋ ಅದು ಸಾತಿಶಯವೆನಿಸುವುದು. ನಿರತಿಶಯವಾದ ಸುಖವನ್ನು ಪಡೆದವನಿಗೆ ಮತ್ತೊಂದೆಂಬುದೆಲ್ಲಿ ಬರಬೇಕು. ಅಂತೆಯೇ ಶರಣನಲ್ಲಿ ಯಾವ ಕಾಮನೆಗಳೂ ಉದಯಿಸುವುದಿಲ್ಲ. ಅವನು ಆಪ್ತಕಾಮ, ನಿಷ್ಕಾಮನಾಗಿರುವನು.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ಶ್ರೀ ಶಿವಕುಮಾರ ಶ್ರೀಗಳು

ಅಲ್ಲಮನ ನಿರ್ಮಾಯ ನಿಲವು
ಬಸವನ ಮಾನವತೆಯ ಒಲವು
ಚೆನ್ನಬಸವನ ಆಧ್ಯಾತ್ಮಿಕ ಗೆಲವು
ಮಾರಯ್ಯನ ಕಾಯಕ ಪ್ರೀತಿ
ಚೆಂದಯ್ಯನ ದಾಸೋಹ ನೀತಿ
ಶರಣರ ಸೇವಾಧರ್ಮ
ಎಲ್ಲವೂ ಸಂಧಿಸಿ
ಶ್ರೀ ಶಿವಕುಮಾರ ಶ್ರೀ ರೂಪತಾಳಿಹವಯ್ಯ
ನಿನ್ನ ಭವ್ಯ ಪರಂಪರೆಯ
ದಿವ್ಯ ದೀಪ್ತಿಯು ಬಹುಕಾಲ ಬೆಳಗಲಯ್ಯ!
ಶ್ರೀ ಗುರು ಸಿದ್ಧಲಿಂಗೇಶ್ವರಾ!

## ಶ್ರೀ ಸಿದ್ಧಗಂಗಾ ಶ್ರೀಗಳ ಮಠ

ಬಹು ಹಿಂದೆ ಹೊತ್ತಿಸಿದ
ದಾಸೋಹದ ಒಲೆ, ಇಂದಿಗೂ ಆರಿಲ್ಲವಯ್ಯ
ಬಹುಹಿಂದೆ ಘೋಷಿಸಿದ
ಬಸವ ಮಂತ್ರ, ಇಂದಿಗೂ ಅಡಗಿಲ್ಲವಯ್ಯಾ!
ಹತ್ತುನೂರಾಗಿ ನೂರು ಸಾಸಿರವಾಗಿ
ಬೆಳೆಯುತಿದೆ ವಿದ್ಯಾರ್ಥಿ ದಂಡು, ಅಯ್ಯಾ
ನಿತ್ಯವೂ ತುಂಬುತಿದೆ ದಾಸೋಹದ ಫಂಡು ಅಯ್ಯಾ!
ಸಹಸ್ರಾರು ಭಕ್ತರಿಗೆ ಸತ್‌ಪಥವ ತೋರಿ,
ಅಸಂಖ್ಯಾತ ಛಾತ್ರರಿಗೆ ಆಶ್ರಯ ನೀಡಿ
ನಿರ್ಮಿಸುತಿದೆ ನಾಗರಿಕರನು ಈ ಧರ್ಮ ಕಮ್ಮಟವಯ್ಯಾ!
ಶ್ರೀ ಸಿದ್ಧಗಂಗಾ ಶ್ರೀಗಳ ಮಠವಯ್ಯಾ!
ಶ್ರೀ ಗುರು ಸಿದ್ಧಲಿಂಗೇಶ್ವರಾ!

## ಮಹಾಪದವಿ

ಬ್ರಹ್ಮ ಪದವಿಯ ಪಡೆದವರು
ಬ್ರಹ್ಮ ಲೋಕವನಾಳುವರಯ್ಯಾ!
ವಿಷ್ಣು ಪದವಿಯ ಪಡೆದವರು
ವಿಷ್ಣು ಲೋಕವನಾಳುವರಯ್ಯ
ರುದ್ರ ಪದವಿಯನ್ನು ಪಡೆದವರು
ರುದ್ರಲೋಕವನಾಳುವರಯ್ಯ!
ನಿನ್ನ ಸದ್ ಭಕ್ತರ ಸೇವೆಯ ಮಹಾಪದವಿಯನು
ಪಡೆದವರು ಸರ್ವಲೋಕವನಾಲುವರಯ್ಯ!
ಶ್ರೀ ಗುರು ಸಿದ್ಧಲಿಂಗೇಶ್ವರಾ!

-- ಅನ್ನದಾನಯ್ಯ ಪುರಾಣಿಕ





# ಕನ್ನಡಿಗರ ಮಾತೃ ಸಂಸ್ಥೆ ಕನ್ನಡ ಸಾಹಿತ್ಯ ಪರಿಷತ್ತಿನ ನೂತನ ಅಧ್ಯಕ್ಷರಾಗಿ ಹಿರಿಯ ಸಂಶೋಧಕ ಶ್ರೀ ಎನ್. ಬಸವಾರಾಧ್ಯರ ಆಯ್ಕೆ



1997ರ ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿಯನ್ನು ಪಡೆದ ಹೆಗ್ಗಳಿಕೆಗೆ ಪಾತ್ರರಾಗಿರುವ ಶ್ರೀ ಎನ್. ಬಸವಾರಾಧ್ಯ ಅವರದು ಬಹುಮುಖ ಪ್ರತಿಭೆ. ತಮ್ಮ ವಿದ್ವತ್ ಪೂರ್ಣ ಗ್ರಂಥಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ, ತೀ.ನಂ.ಶ್ರೀ ಸ್ಮಾರಕ ಬಹುಮಾನ, ದೇವರಾಜ ಬಹುದ್ದೂರ್ ಸಾಹಿತ್ಯ ಬಹುಮಾನ, ಮೈಸೂರಿನ ಶಿವರಾತ್ರೇಶ್ವರ ಧಾರ್ಮಿಕ ದತ್ತಿ ಪ್ರಶಸ್ತಿ ಪಡೆದುಕೊಂಡಿರುವ ನಾಡಿನ ಹಿರಿಯ ವಿದ್ವಾಂಸ ಸಂಶೋಧಕ ಶ್ರೀ ಎನ್. ಬಸವಾರಾಧ್ಯರು ಪ್ರಾಚೀನ ಕಾವ್ಯಗಳ ಗ್ರಂಥ ಸಂಪಾದನೆ, ಕನ್ನಡ - ಕನ್ನಡ ನಿಘಂಟು ರಚನೆಯಲ್ಲಿ ತಮ್ಮ ಬದುಕನ್ನು ಅರ್ಪಿಸಿಕೊಂಡವರು.

1926ರಲ್ಲಿ ಕೋಲಾರ ಜಿಲ್ಲೆಯ ನಾರಸಿಂಗನ ಹಳ್ಳಿಯಲ್ಲಿ ಜನನ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಸ್ನಾತಕೋತ್ತರ ಪದವಿ. ಪ್ರಾಚ್ಯ ವಿದ್ಯಾ ಸಂಶೋಧನಾಲಯದಲ್ಲಿ ಸ್ನಾತಕ ವಿಶೇಷ ತಜ್ಞರಾಗಿ ವೃತ್ತಿ ಜೀವನವನ್ನು ಆರಂಭಿಸಿದ ಶ್ರೀ ಬಸವಾರಾಧ್ಯರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ - ಕನ್ನಡ ಬೃಹತ್ ನಿಘಂಟುವಿನ ಉಪಸಂಪಾದಕರಾಗಿ, 1955ರಿಂದ 1971ರವರೆಗೆ ಸಂಪಾದಕರಾಗಿ ಸೇವೆ ಸಲ್ಲಿಸಿದರು.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಸಂಶೋಧನಾ ವಿಭಾಗದ ಉಪನಿರ್ದೇಶಕರಾಗಿ, ಕನ್ನಡ - ಕನ್ನಡ ನಿಘಂಟುವಿನ ಪ್ರಧಾನ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಪ್ರೊ. ಎ.ಆರ್. ಕೃಷ್ಣಶಾಸ್ತ್ರಿ, ಆಚಾರ್ಯ ತೀನಂಶ್ರೀ, ಆಚಾರ್ಯ ಡಿ.ಎಲ್. ನರಸಿಂಹಾಚಾರ್ ಅವರ ಗರಡಿಯಲ್ಲಿ ಪಳಗಿರುವ ಶ್ರೀಯುತರು ನಿಘಂಟು ಶಾಸ್ತ್ರದಲ್ಲಿ ಅಪಾರವಾದ ಪಾಂಡಿತ್ಯವನ್ನು ಹೊಂದಿದ್ದಾರೆ.

ವೈಜ್ಞಾನಿಕವಾಗಿ ಹಸ್ತಪ್ರತಿ ಓಲೆಗರಿಗಳನ್ನು ಅಧ್ಯಯನ ಮಾಡಿ ಪರಿಷ್ಕರಿಸಿ, ಸಂಪಾದಿಸಿ ಪ್ರಕಟಿಸಿದ್ದಾರೆ. ಹರಿಶ್ಚಂದ್ರ ಕಾವ್ಯ, ಧರ್ಮಾನಾಥ ಪುರಾಣ, ಆರಾಧ್ಯ ಚರಿತ್ರಾ, ಚೇರಮ ಕಾವ್ಯ, ಉದ್ಭಟದೇವ ಚರಿತ್ರೆ, ಅಬ್ಬಲೂರು ಚರಿತೆ, ತೊರವೆ ರಾಮಾಯಣ, ಸಿದ್ಧಲಿಂಗೇಶ್ವವರ ಸಾಂಗತ್ಯವೂ ಸೇರಿದಂತೆ ಮೂವತ್ತಕ್ಕೂ ಹೆಚ್ಚು ಸಂಪಾದಿತ ಕೃತಿಗಳು ಪ್ರಕಟಗೊಂಡಿವೆ. ನೂರಕ್ಕೂ ಹೆಚ್ಚು ಸಂಶೋಧನ ಲೇಖನಗಳು ಬೆಳಕು ಕಂಡಿವೆ.

ಉಪಾಯನ, ದೇವಗಂಗೆ, ಅಮರವಾಣಿ ಸಂಭಾವನಾ ಗ್ರಂಥಗಳನ್ನು ಸಂಪಾದಿಸಿಕೊಟ್ಟಿರುವ ಶ್ರೀ ಎನ್. ಬಸವರಾಧ್ಯರು ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲೀಷ್ - ಕನ್ನಡ ನಿಘಂಟು ಪರಿಷ್ಕರಣ ಯೋಜನೆಯ ಸಂಪಾದನ ಸಮಿತಿ, ಕನ್ನಡದಲ್ಲಿ ಕಛೇರಿ ಕೈಪಿಡಿ ಸಿದ್ಧತಾ ಸಮಿತಿ, ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ - ಕನ್ನಡ ನಿಘಂಟು ಸಂಪಾದನ ಸಮಿತಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಭಾಷಾಂತರ ಸರಳೀಕರಣ ಸಮಿತಿ ಸದಸ್ಯರಾಗಿ ಹಾಗೂ ಯು.ಜಿ.ಸಿ. ಯಿಂದ ನಿಯೋಜಿತ ಪ್ರಧಾನ ಸಂಶೋಧಕರಾಗಿ ಸೇವೆ ಸಲ್ಲಿಸಿ ಆಯಾ ಸ್ಥಾನಗಳಿಗೆ ಘನತೆ ಗೌರವವನ್ನು ತಂದು ಕೊಟ್ಟ ಹಿರಿಮೆ. ಪ್ರಸ್ತುತ ಬಿ.ಎಂ. ಶ್ರೀ ಪ್ರತಿಷ್ಠಾನದ ಅಧ್ಯಕ್ಷರಾಗಿಯೂ ಕಾರ್ಯ ನಿರ್ವಹಿಸುತ್ತಿದ್ದಾರೆ. ಶ್ರೀ ಬಸವಾರಾಧ್ಯರು ಸಾಹಿತ್ಯ, ಸಂಶೋಧನೆ, ಗ್ರಂಥ ಸಂಪಾದನಾ ಕ್ಷೇತ್ರಗಳಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ನಾಡಿನ ಹಲವಾರು ಪ್ರತಿಷ್ಠಿತ ಸಂಘ ಸಂಸ್ಥೆಗಳು ಗೌರವಿಸಿವೆ.

ಸರಳತೆ, ಸಜ್ಜನಿಕೆ, ನೇರ ನಡೆ ನುಡಿಗಳಿಗೆ ಹೆಸರಾಗಿರುವ ಶ್ರೀ ಎನ್. ಬಸವಾರಾಧ್ಯರು "ಮಾತು ಬೆಳ್ಳಿಯಾದರೆ ಮೌನ ಚಿನ್ನ" ಎಂಬುದನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದಾರೆ. ಮಾತಿಗಿಂತ ಕೃತಿಗೆ ಹೆಚ್ಚು ಮಹತ್ವವನ್ನು ಕೊಡುತ್ತಿದ್ದಾರೆ. ಹಲವಾರು ಪ್ರಗತಿಪರ ಯೋಜನೆಗಳನ್ನು ಹಮ್ಮಿಕ್ಕೊಂಡು ಅವುಗಳನ್ನು ಕಾರ್ಯಗತಗೊಳಿಸಿ ಕನ್ನಡ ಸಾಹಿತ್ಯ ಪರಿಷತ್ತಿನ ಕೀರ್ತಿಯನ್ನು ಮತ್ತಷ್ಟು ಬೆಳಗಿಸಿಬೇಕೆಂಬ ಮಹತ್ವಾಂಕ್ಷೆಯಿಂದ ಅಧ್ಯಕ್ಷರಾಗಿ ಆಡಳಿತದ ಚುಕ್ಕಾಣಿಯನ್ನು ಹಿಡಿದಿರುವ ಶ್ರೀಯುತರ ಕನಸು ನನಸಾಗಿ ಪರಿಷತ್ತಿನ ಘನತೆ ಗೌರವ ಮತ್ತಷ್ಟು ವ್ಯಾಪಕವಾಗಿ ಹರಡಲಿ ಎಂದು ಸಿದ್ಧಗಂಗಾ ಹಾರೈಸುತ್ತದೆ.

# ವಚನ ಸಾಹಿತ್ಯ : ಮೌಲ್ಯ ವಿವೇಚನೆ

-- ಡಾ. ಸಿ. ಪಿ. ಕೃಷ್ಣಕುಮಾರ್
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು

ಒಂದು ದೃಷ್ಟಿಯಿಂದ ವಚನಕಾರರ ಕ್ರಾಂತಿಗೆ ಸದೃಶವಾದುದ್ದು ಜಗತ್ತಿನ ಇತಿಹಾಸದಲ್ಲಿ ಇನ್ನೊಂದು ಕಂಡುಬರುವುದಿಲ್ಲ ಎಂದರೆ ಉತ್ಪ್ರೇಕ್ಷೆಯಾಗಲಾರದು. ವಚನಕಾರರು ಸಾರತಃ ಅಧ್ಯಾತ್ಮ ಜೀವಿಗಳು, ಅನುಭಾವಿಗಳು; ಅವರ ಆಂದೋಲನ ಪ್ರಧಾನವಾಗಿ ಧಾರ್ಮಿಕವಾದದ್ದು. ಆದರೆ ಅದು ಅಪ್ರತ್ಯೇಕವೆಂಬಂತೆ ಸಾಮಾಜಿಕ, ಆರ್ಥಿಕ ಆಯಾಮಗಳನ್ನೂ ಮೈಗೂಡಿಸಿಕೊಂಡಿದೆಯೆಂಬುದು ಅದರ ಅನನ್ಯತೆ ಎಂತಲೇ ಅದು ಬಹುಮುಖಿ ಕ್ರಾಂತಿ, ಸಮಗ್ರ ಕ್ರಾಂತಿ.

ವಚನ ಸಾಹಿತ್ಯ ಮೌಲ್ಯಗಳ ಒಂದು ಸಂಕೀರ್ಣ; ಅದು ಹಲವಾರು ಶ್ರೇಯಸ್ಕರ ಮೌಲ್ಯಗಳನ್ನು ಗರ್ಭೀಕರಿಸಿಕೊಂಡಿದೆ ಮಾತ್ರವಲ್ಲ, ತನಗೆ ತಾನೆ ಒಂದು ಮಹತ್ವದ ಮೌಲ್ಯವಾಗಿದೆ. ಈ ಮೌಲ್ಯಸಮುಚ್ಚಯದ ಅನುಸಂಧಾನ ಇಂದಿಗೂ ಅತ್ಯಂತ ಪ್ರಸ್ತುತ ಮತ್ತು ಪ್ರಯೋಜಕ.

ಹನ್ನೆರಡನೆಯ ಶತಮಾನದಲ್ಲಿ ಸಂಘಟಿಸಿದ ಶರಣಕ್ರಾಂತಿಯ ಮಾಧ್ಯಮವೂ ಹೌದು, ಫಲವೂ ಹೌದು, ವಚನ ವಾಙ್ಮಯ, ಆದ್ದರಿಂದ ವಚನವಿವೇಚನೆಯೆಂದರೆ, ಶರಣರ ಪರಿಕಲ್ಪನೆಯ ಬದುಕಿನ ವಿವೇಚನೆಯೇ ಸರಿ, ಸಾಹಿತ್ಯ ಪ್ರಜ್ಞೆಯಲ್ಲ, ಜೀವನಪ್ರಜ್ಞೆ - ಅದರಲ್ಲೂ ಸಮಷ್ಟಿ ಜೀವನಪ್ರಜ್ಞೆ - ವಚನ ಸಮುದಾಯದ ಮೂಲ ಪ್ರೇರಣೆಯಾಗಿದೆ. "ಶಬ್ದಾರ್ಥಗಳ ಸಂಯೋಗ" ಎಂಬ ನಿಷ್ಪತ್ತಿಯಷ್ಟೆ ಅಲ್ಲದೆ 'ಸ-ಹಿತ' - ಎಂದರೆ ಹಿತದಿಂದ ಕೂಡಿದ್ದು - ಎಂಬ ನಿಷ್ಪತ್ತಿಯೂ ನಿಲ್ಲುತ್ತದೆ. ವಚನ ಸಾಹಿತ್ಯ ಸಂದರ್ಭದಲ್ಲಿ.

ನಾವು ನೆನಪಿಡಬೇಕು, ಅಂದು ನಡೆದದ್ದು ಕೇವಲ ಒಂದು ಸುಧಾರಣೆಯಲ್ಲ, ಚಳುವಳಿಯಲ್ಲ, ಒಂದು ಕ್ರಾಂತಿ ಎಂಬುದನ್ನು. ಶರಣರು ತಮ್ಮಕಾಲಕ್ಕಿಂತ ಮುಂದೆ ಹೋಗಿ ಆಲೋಚಿಸಿದ್ದರಿಂದ ಮತ್ತು ಆಲೋಚಿಸಿದ್ದನ್ನು ಅನುಷ್ಠಾನಕ್ಕೂ ಇಳಿಸಿದ್ದರಿಂದ ಅದಕ್ಕೆಲ್ಲ ಆ ಯುಗ ಇನ್ನೂ ಪಕ್ವವಾಗಿಲ್ಲದ್ದರಿಂದ, ಆ ಕ್ರಾಂತಿಯ ಯಶಸ್ಸು ಅಲ್ಪಾಯಿದಾಗುವುದು ಅನಿವಾರ್ಯವಾಯಿತು. ಆದರೆ ಈ ಹೊತ್ತು ನಾವು ಶರಣರ ವಿಚಾರಧಾರೆಯನ್ನು ಕಡೆಯಪಕ್ಷ ಅರ್ಥಮಾಡಿಕೊಳ್ಳುವ ಸ್ಥಿತಿಯಲ್ಲಿದ್ದೇವೆ. ಹಾಗೆ ನೋಡಿದರೆ, ಅವರು ಇಂದಿಗೂ ಮುಂದಿದ್ದಾರೆ ಎನಿಸದಿರದು.

ಒಂದು ಕಡೆ ಪುರೋಹಿತಶಾಹಿಯನ್ನು ಪ್ರತಿಭಟಿಸಿ, ಇನ್ನೊಂದು ಕಡೆ ರಾಜಶಾಹಿಯನ್ನು ಧಿಕ್ಕರಿಸಿ, ಅನಿಷ್ಟ ಜಡ ವ್ಯವಸ್ಥೆಯನ್ನು ಛಿದ್ರಗೊಳಿಸುವ, ತನ್ಮೂಲಕ ಜನಶೋಷಣೆಯ ಸರ್ವಪ್ರಕಾರಗಳಿಗೂ ಪೂರ್ಣ ವಿರಾಮ ಹಾಕಿ, "ಸಕಲ ಜೀವಾತ್ಮರ ಲೇಸನ್ನು", ಸರ್ವೋದಯವನ್ನು ಸಾಧಿಸುವ ಆಶಯ ವಚನಕಾರರದಾಗಿತ್ತು. ಸಮಾನತೆಯ ಅಡಿಪಾಯದ ಮೇಲೆ ನಿಂತ ನವಸಮಾಜವೊಂದರ ನಿರ್ಮಾಣ ಅವರ ಗುರಿಯಾಗಿತ್ತು; ಒಂದು ತೆರನಾದ ಪ್ರಜಾಪ್ರಭುತ್ವದ ಸ್ಥಾಪನೆ ಆ ಜನಪರ ಆಂದೋಲನದ ಧ್ಯೇಯವಾಗಿತ್ತು. 'ತಮಂಧಘನ'ವಾಗಿದ್ದ ಸಮಾಜಕ್ಕೆ 'ಶಿವನ ಪ್ರಕಾಶ'ವನ್ನು ಹಾಯಿಸುವ ಕಾಯಕವನ್ನು ಕೈಕೊಂಡರು ಶರಣರು.

"ಆನು ಒಲಿದಂತೆ ಹಾಡುವೆ" ಎಂಬ ಬಸವಣ್ಣನವರ ಮಾತು ವಚನ ವೈಶಿಷ್ಟ್ಯವನ್ನು ಸೂಚಿಸುವುದಷ್ಟೆ ಅಲ್ಲದೆ, ಸಂಪ್ರದಾಯ ವಿರೋಧಿ ಧೋರಣೆಯನ್ನೂ ಸಮರ್ಥವಾಗಿ ಸಂಕೇತಿಸುತ್ತದೆ. ವೇದಶಾಸ್ತ್ರಾಗಮನಿಷ್ಠವಾದ ಪುರೋಹಿತಶಾಹಿಯನ್ನು ಶರಣರು ನೇರವಾಗಿಯೆ ಖಂಡಿಸಿ ನಿರಾಕರಿಸಿದರು. ಆದರೆ ಅವರ ರಾಜತ್ವ ನಿರಾಕರಣ ಅಷ್ಟು ಪ್ರಖರವಾಗಿರದೆ, ಪರೋಕ್ಷವಾದದ್ದು. ರಾಜಪ್ರಭುತ್ವ ಪ್ರೋತ್ಸಾಹಿಸುವ ಎಲ್ಲ ಮೌಲ್ಯಗಳನ್ನು - ಅಥವಾ ಅಪಮೌಲ್ಯಗಳನ್ನು - ಶರಣರು ಅಲ್ಲಗಳೆದರೆಂಬುದನ್ನು ಗಮನಿಸಬೇಕು. "ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ?" ಎಂಬ ಆಯ್ದಕ್ಕಿ ಲಕ್ಕಮ್ಮನ ಉಕ್ತಿಯಲ್ಲಿ, "ಬಿಜ್ಜಳನ ಭಂಡಾರ ಎಮಗೇಕಯ್ಯ?" ಎಂಬ ಬಸವಣ್ಣನವರ ಉಕ್ತಿಯಲ್ಲಿ ರಾಜತ್ವವಿರೋಧಿ ನಿಲುವು ಇಂಗಿತವಾಗಿದೆ. ಶರಣರಾದರೂ 'ನಿರಾಶಾ ಮಹಾತ್ಮ'ರು. ಕಲ್ಯಾಣದ ಕ್ರಾಂತಿ ಬಿಜ್ಜಳನ ಕೊಲೆಯಲ್ಲಿ ಪರ್ಯವಸಾನಗೊಂಡಿತೆಂದು ಹೇಳುತ್ತಾರೆ. ಅದು ಎಷ್ಟರಮಟ್ಟಿಗೆ ಐತಿಹಾಸಿಕ ಸತ್ಯವೊ, ಆ ಕೊಲೆಗೆ ಯಾರು ಕಾರಣರೂ ಖಚಿತವಾಗಿ ತಿಳಿಯದು. ಆದರೆ ರಾಜಶಾಹಿಯ ನಿರಾಕರಣ, ನಿರಸನಗಳಿಗೆ ಅದೊಂದು ಸಂಕೇತವೆಂದು ಭಾವಿಸಬಹುದು.





ಕಲ್ಯಾಣದ ಸಂಕ್ರಾಂತಿ ನಮಗೆ ಸ್ವಲ್ಪಮಟ್ಟಿಗೆ ಈಚಿನ ಫ್ರೆಂಚ್ ಮಹಾಕ್ರಾಂತಿಯನ್ನು ನೆನಪಿಸುತ್ತದೆ. ಫ್ರಾನ್ಸಿನ ಕ್ರಾಂತಿ ಕೇವಲ ರಾಜಕೀಯವಾದುದಲ್ಲ, ಮೂಲತಃ ಅದು ಬೌದ್ಧಿಕವಾಗಿದ್ದು, ಸ್ಥಗಿತ ಸಾಮಾಜಿಕ ಆರ್ಥಿಕ ವ್ಯವಸ್ಥೆಯ ವಿರುದ್ಧ ನಡೆದದ್ದು ಎಂದು ಚರಿತ್ರಕಾರರು ಹೇಳುತ್ತಾರೆ. ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ (Liberty, Equality, Fraternity)ಗಳು ಅದರ ಮಾರ್ಗದರ್ಶಕ ಸೂತ್ರಗಳಾಗಿದ್ದುವು. ವೀರಶೈವ ಕ್ರಾಂತಿಯ ಸ್ವರೂಪವೂ ಇಂಥದೇ; ಮೂಲಭೂತವಾಗಿ ಅದು ವೈಚಾರಿಕವಾದುದು.

ಶರಣರು ಇಹ, ಪರಗಳನ್ನು ಲೌಕಿಕ ಪಾರಲೌಕಿಕಗಳನ್ನು ಬೇರೆ ಬೇರೆ ಘಟಕಗಳನ್ನಾಗಿ ಬಗೆಯಲಿಲ್ಲ; ಎರಡನ್ನೂ ಏಕಾಖಂಡವಾಗಿ ತೆಗೆದುಕೊಂಡರು ಎಂಬುದು ಮುಖ್ಯ. ಸ್ವರ್ಗ ಮರ್ತ್ಯಗಳು ಬೇರೆ ಬೇರೆ ಎಂಬ ನಂಬಿಕೆಯೇ ಎಲ್ಲ ಅನರ್ಥ, ಅನಾಚಾರಗಳ ಬೇರು. ಶರಣರಲ್ಲಿ ಅದಕ್ಕೆ ಅವಕಾಶವಿಲ್ಲ. "ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ" ಎಂದು ಘೋಷಿಸುತ್ತಾರೆ, ಬಸವಣ್ಣ; "ಆಚಾರವೇ ಸ್ವರ್ಗ, ಅನಾಚಾರವೇ ನರಕ" ಇತ್ಯಾದಿಯಾಗಿ ಪುನರ್‌ಮೌಲ್ಯಮಾಪನ ಮಾಡುತ್ತಾರೆ. ಈ ನೆಲದ ಮೇಲೆಯ ಸ್ವರ್ಗವನ್ನು ಅರಳಿಸುವುದು, ಮರ್ತ್ಯವನ್ನೇ ಕೈಲಾಸವನ್ನಾಗಿಸುವುದು ಶರಣರ ಆದರ್ಶವಾಗಿತ್ತು. ಸ್ವರ್ಗವೆಂಬುದು ಎಲ್ಲೋ ಇದೆ ಎಂದು ನಂಬಿದರೂ, ಅದರ ಕೀಲಿಕೈ ಮರ್ತ್ಯದಲ್ಲಿದೆಯೆಂಬುದನ್ನು ಮರೆಯಬಾರದು. ಸ್ವರ್ಗಪ್ರವೇಶದ ಅರ್ಹತೆಯನ್ನು ಭೂಮಿಯಲ್ಲೆ ಸಂಪಾದಿಸಬೇಕು; "ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು". ವಚನಕಾರರ ದೃಷ್ಟಿಯಲ್ಲಿ ಮುಕ್ತಿ ಎಂಬುದು ಸತ್ತ ಮೇಲೆ ಪಡೆಯತಕ್ಕದ್ದಲ್ಲ; ಬದುಕಿರುವಾಗಲೆ ಗಳಿಸಬೇಕಾದ್ದು; ಅದು ಅಂಧಶ್ರದ್ಧೆ ಕಂದಾಚಾರಗಳಿಂದ ಬಿಡುಗಡೆ, ಶೋಷಣೆಯಿಂದ ಬಿಡುಗಡೆ, ಬಡತನದಿಂದ ಬಿಡುಗಡೆ ಮತ್ತು ಸಾಮಾಜಿಕ ಅಶಿವದಿಂದ ಎಂತೊ ಅಂತೆ ಮಾನಸಿಕ ಅಶಿವದಿಂದ ಬಿಡುಗಡೆ. ಅವರ ದೃಷ್ಟಿ ಆಶ್ಚರ್ಯಕರವಾಗಿ ವೈಜ್ಞಾನಿಕವಾದದ್ದು, ಶುದ್ಧ ಅಧ್ಯಾತ್ಮಕ್ಕೂ ವೈಜ್ಞಾನಿಕತೆಗೂ ವಿರೋಧವಿಲ್ಲ.

ವಚನಕಾರರ ಆಧ್ಯಾತ್ಮಿಕ ಅಭೀಪ್ಸೆ ಎಷ್ಟು ತೀವ್ರವಾದುದೊ ಅಷ್ಟೇ ಪ್ರಗಾಢವಾದುದು ಅವರ ಸಾಮಾಜಿಕ ಪ್ರಜ್ಞೆ, ಅದಕ್ಕೂ ಬೆನ್ನೆಲುಬಾಗಿರತಕ್ಕದ್ದು ಅವರ ಅತೀವ ಮಾನವೀಯ ಧೋರಣೆ ಮತ್ತು ಜೀವ ಪ್ರೇಮ. ಅವರು ಎಲ್ಲವನ್ನೂ ಆಧ್ಯಾತ್ಮೀಕರಿಸಿದರು, ಆದರೆ ಏನೊಂದನ್ನೂ ಅಮಾನವೀಯಗೊಳಿಸಲಿಲ್ಲ. ಸಾಮಾನ್ಯ ಮನುಷ್ಯ ಶರಣರ ಲಕ್ಷ್ಯ; ಅವನ ಉದ್ಧಾರದ ಬಗ್ಗೆ ಅವರ ಕಳಕಳಿ. ವಾಸ್ತವವಾಗಿ, ವೀರಶೈವ ಧರ್ಮ ದೇವರನ್ನು ನೆಮ್ಮಿಯೂ ಮಾನವಕೇಂದ್ರಿತವಾದ ಧರ್ಮ, ಮಾನವೀಯ ಧರ್ಮ. ಹಾಗಲ್ಲದೆ, ಧರ್ಮ ದೈವಕೇಂದ್ರಿತವಾದಾಗಲೇ ಎಲ್ಲ ಕೆಡುಕುಗಳು ತಲೆಯೆತ್ತುವುದು, ಶೋಷಣೆಗೆ ಆಸ್ಪದವಾಗುವುದು, ಯಜ್ಞಯಾಗಾದಿ ಕರ್ಮಕಾಂಡ ವಿಜೃಂಭಿಸುವುದು. ಶರಣರು ಶ್ರೀಸಾಮಾನ್ಯನ ಘನತೆಗೆ ಒತ್ತುಕೊಟ್ಟರು; ಅವನಿಗೆ ಒಂದರ್ಥದಲ್ಲಿ ಆತ್ಮವನ್ನೂ, ಜೊತೆಗೆ ಆತ್ಮಪ್ರತ್ಯಯವನ್ನೂ ತಂದುಕೊಟ್ಟರು, ಇದು ಸಾಮಾನ್ಯ ಸಂಗತಿಯಲ್ಲ.

ಜನಸಾಮಾನ್ಯರ ಪಾಲಿಗೆ ಧರ್ಮವನ್ನು ಸ್ಪಷ್ಟೀಕರಿಸಿ, ಗ್ರಾಹ್ಯವನ್ನಾಗಿ ಮಾಡಿದ್ದು ವಚನಕಾರರ ಒಂದು ದೊಡ್ಡ ಸಾಧನೆ. ಅವರ ಧರ್ಮದ ಪರಿಕಲ್ಪನೆ ಸರಳವಾದುದು ಮತ್ತು ಯಾಥಾರ್ಥವಾದುದು; "ದಯವೇ ಧರ್ಮದ ಮೂಲವಯ್ಯಾ" ಎಂದು ಸಾರುತ್ತಾರೆ ಬಸವಣ್ಣ. ಜೀವಕಾರುಣ್ಯ, ಅಹಿಂಸೆ, ಸದಾಚಾರಗಳು ಧರ್ಮದ ತಳಹದಿ. ಧರ್ಮ ಬೇರೆ, ಮತ ಬೇರೆ; ಮತ ವಿಧಿಗಳು, ಆಚರಣೆ (rituals) ಗಳನ್ನು ಪುರಸ್ಕರಿಸುತ್ತದೆ. ಅವುಗಳಿಂದ ಪ್ರಯೋಜನವಿಲ್ಲ. "ಆಚಾರವೆಂಬುದು ಹಾವಸೆಗಲ್ಲು" ಎನ್ನುತ್ತಾರೆ ಬಸವಣ್ಣ. ಹೀಗಾಗಿ, ಧರ್ಮದ ನೈಜಸ್ವರೂಪವನ್ನು ವಚನಕಾರರು ಅನಾವರಣಗೊಳಿಸಿದರು; ಅದು ಎಲ್ಲರೂ ಅವಲಂಬಿಸಬಹುದಾದ್ದು, ಅನುಸರಿಸಬಹುದಾದ್ದು ಎಂದು ತೋರಿಸಿಕೊಟ್ಟರು.

ಮಾನವೀಯ ದೌರ್ಬಲ್ಯಗಳನ್ನು ಒಪ್ಪಿಕೊಂಡವರು, ವಚನಕಾರರು, ಮನುಷ್ಯ ಹುಟ್ಟಿನಿಂದಲೇ ಪರಿಪೂರ್ಣ ಎಂಬುದು ಅವರ ತಿಳಿವಳಿಕೆಯಲ್ಲ. ಆದರೆ ವಿಕಾಸದಲ್ಲಿ ಅವರಿಗೆ ವಿಶ್ವಾಸ; ಸಾಧನೆಯಿಂದ ನರ ಹರನಾಗಬಲ್ಲ ಎಂಬುದರ ನಂಬಿಕೆ. ಎಲ್ಲರಿಗೂ ವೈರಾಗ್ಯವನ್ನು ವಿಧಿಸಬಯಸಲಿಲ್ಲ, ಶರಣರು. ಏಕೆಂದರೆ, "ಒಲಿವೆನೆಂಬುದು ಕಾಯಗುಣ" ಎಂಬುದನ್ನು ಅವರು ಬಲ್ಲವರಾಗಿದ್ದರು. "ಒಡಲುಗೊಂಡವ ಹಸಿವ, ಒಡಲು ಗೊಂಡವ ಹುಸಿವ... ನೀನೆನ್ನಂತೊಮ್ಮೆಒಡಲುಗೊಂಡು ನೋಡಾ" ಎಂದು ಶಿವನಿಗೇ ಸವಾಲು ಹಾಕುತ್ತಾನೆ ಜೇಡರ ದಾಸಿಮಯ್ಯ. ಒಟ್ಟಿನಲ್ಲಿ, ತಪ್ಪು ಮಾಡುವುದು ಮನುಷ್ಯ ಸ್ವಭಾವ, ಆದರೆ ಅದನ್ನು ತಿದ್ದಿಕೊಳ್ಳಬೇಕು, ಗೆದ್ದು ನಿಲ್ಲಬೇಕು ಎಂಬುದು ಶರಣರ ಮತ. ನಾನಾ ಪ್ರಲೋಭನೆಗಳ ಕಾಟದ ಹಾಗೂ ಅವುಗಳ ವಿರುದ್ಧ ನಡೆದ ಉಗ್ರವಾದ ಹೋರಾಟದ ಜ್ವಲಂತ ದಾಖಲೆಗಳೆ ಆಗಿವೆ, ಬಹುಪಾಲು ವಚನಗಳು.

ಶರಣರ ಜೀವನಪ್ರೀತಿಯೂ ಮಹತ್ವದ್ದು, ಸಂಸಾರತ್ಯಾಗವನ್ನು ಅವರು ಬೋಧಿಸಲಿಲ್ಲ; ಸಂಸಾರದಲ್ಲಿದ್ದುಕೊಂಡೇ ಧರ್ಮವನ್ನಾಚರಿಸಿ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳಬಹುದು, ದೇವರನ್ನು

ಮೆಚ್ಚಿಸಬಹುದು ಎಂಬುದು ಅವರ ನಿಲುವಾಗಿತ್ತು. ಹೆಣ್ಣನ್ನು ಅವರು ಮಾಯೆಯೆಂದು ದೂರಲಿಲ್ಲ; ದೂರೀಕರಿಸಲಿಲ್ಲ. "ಹೆಣ್ಣು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ" ಎಂಬ ಸಿದ್ಧರಾಮನ ನುಡಿ ಅರ್ಥವತ್ತಾದುದು. "ಭಕ್ತನ ಮನ ಹೆಣ್ಣಿನೊಳಗಾದೊಡೆ, ಮದುವೆಯಾಗಿ ಕೂಡುವುದು" ಎಂದು ಅವನು ಅನುಮತಿ ಕೊಡುತ್ತಾನೆ. "ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎಂಬ ದಾಸಿಮಯ್ಯನ ಮಾತು, ದಾಂಪತ್ಯಕ್ಕೆ ಶರಣರು ಕೊಟ್ಟ ಮನ್ನಣೆಯನ್ನು ಅಭಿವ್ಯಕ್ತಿಸುತ್ತದೆ. ಇಹದ ಬಾಳ್ವೆಯಲ್ಲಿ ಸವಿಯಿದೆ, ಅದನ್ನು ಧರ್ಮಕ್ಕೆ ಅವಿರುದ್ಧವಾಗಿ ಆಸ್ವಾದಿಸಬೇಕು ಎಂಬುದು ವಚನಕಾರರ ಒಟ್ಟಿನ ಧೋರಣೆ. ಅಂತೆಯೆ, ಲೋಕದ ಜವಾಬ್ದಾರಿಯಿಂದ ನುಣುಚಿಕೊಂಡು ಪಲಾಯನ ಮಾಡುವು ದನ್ನು ಅದು ಒಪ್ಪುವುದಿಲ್ಲ; 'ಶಿವಲೋಕಭ್ರಮೆ'ಗೆ ಉತ್ತೇಜನ ಕೊಡುವುದಿಲ್ಲ.

ದೇಹವನ್ನು ಶರಣರು ಹೇಯವೆನ್ನಲಿಲ್ಲ ಎಂಬುದೂ ಗಮನಾರ್ಹ. ದೇಹವೇ ದೇಗುಲ ಎಂದು ಬಸವಣ್ಣ, ಅಲ್ಲಮಪ್ರಭು ಇಬ್ಬರೂ ಘೋಷಿಸುತ್ತಾರೆ. ಈ ನಿಲುವಿನಿಂದಾಗಿ ದೇವಾಲಯ ನಿರ್ಮಿತಿಯ ಅನಗತ್ಯತೆ ಸ್ಥಾಪಿತವಾಯಿತು ಹಾಗೂ ತನ್ಮೂಲಕ, ಪುರೋಹಿತಶಾಹಿಯ ಅನಾಹುತಗಳನ್ನು ತಪ್ಪಿಸಿ ದಂತಾಯಿತು.

ಶರಣರು ಪ್ರಾಣಿಬಲಿಯನ್ನು ವಿರೋಧಿಸಿದರು; ಸಮಾಜದಲ್ಲಿ ನೆಲೆಗೊಂಡಿದ್ದ ಮೌಢ್ಯದ ವಿವಿಧ ಪ್ರಕಾರಗಳಿಗೆ ಕೊಡಲಿಪೆಟ್ಟು ಕೊಟ್ಟರು; ಕರ್ಮತತ್ತ್ವವನ್ನು ತಿರಸ್ಕರಿಸಿದರು; ಎಲ್ಲಕ್ಕಿಂತ ಮುಖ್ಯವಾಗಿ, ಸಾಮಾನ್ಯ ಜನತೆಯನ್ನು ಸುಲಿಯುವ ಪ್ರಬಲ ಸಾಧನವಾಗಿರುವ ಜ್ಯೋತಿಷ್ಯವನ್ನು ಖಂಡಿಸಿದರು. ದೇವರು, ಧರ್ಮಗಳ ಹೆಸರಿನಲ್ಲಿ ರೂಢಮೂಲವಾಗಿದ್ದ ಎಲ್ಲ ಅನಿಷ್ಟಗಳನ್ನೂ ಬೇರುಸಹಿತ ಕಿತ್ತೊಗೆಯುವುದು ಅವರ ಉದ್ದೇಶವಾಗಿತ್ತು. ಒಂದರ್ಥದಲ್ಲಿ ಅವರು ಮೊದಲು ಮಾಡಿದ್ದು ಧರ್ಮದ ಶುದ್ಧೀಕರಣ; ಅನಂತರ, ವ್ಯಕ್ತಿಯ ಹಾಗೂ ಸಮಾಜದ ಶುದ್ಧೀಕರಣ, ಉದ್ಧಾರ.

"ವಿಪ್ರ ಮೊದಲಾಗಿ ಅಂತ್ಯಜ ಕಡೆಯಾಗಿ" ಸರ್ವರೂ ಸಮಾನರು, ತಾರತಮ್ಯ ಹುರುಳಿಲ್ಲದ್ದು ಎಂಬುದನ್ನು ಶರಣರು ಸಾರಿದರು ಮಾತ್ರವಲ್ಲ; ಆಚರಣೆಗೂ ತಂದು ತೋರಿದರು. ಜಾತಿಭೇದಗಳನ್ನು, ಅಸ್ಪೃಶ್ಯತೆಯ ಕಳಂಕವನ್ನು ಅವರು ತತ್ಕಾಲ ಕ್ಕಾದರೂ ತೊಡೆದುಹಾಕಿದರು. ಅವರು ಪ್ರಾಧಾನ್ಯವಿತ್ತದ್ದು ಜಾತಿಗಲ್ಲ, ನೀತಿಗೆ. ಸಾಮಾಜಿಕ ಸ್ತರದಲ್ಲಿ ಮಾತ್ರವಲ್ಲದೆ, ಧಾರ್ಮಿಕ ಸ್ತರದಲ್ಲೂ ಸಮಾನತೆ ಅದರಿಂದ ಊರ್ಜಿತವಾಯಿತು; ಎಲ್ಲರಿಗೂ ಆಧ್ಯಾತ್ಮ ಸಾಧನೆಯ ಹಕ್ಕುಗಳು ಪ್ರಾಪ್ತವಾದುವು.

ಪುರುಷರ ಸ್ಥಾನಮಾನಗಳನ್ನೆ ವಚನಕಾರರು ಸ್ತ್ರೀಯರಿಗೂ ನೀಡಿದರೆನ್ನುವುದು ಅತ್ಯಂತ ಪ್ರಾಮುಖ್ಯದ ವಿಚಾರ. ಲಿಂಗವನ್ನು 'ಪತಿ' ಸ್ಥಾನದಲ್ಲಿರಿಸಿ ತಾವು 'ಸತಿ' ಸ್ಥಾನದಲ್ಲಿ ನಿಂತ ಶರಣರು ಹೆಣ್ಣನ್ನು ಕೀಳಾಗಿ ಕಾಣುವುದು ಶಕ್ಯವಿರಲಿಲ್ಲ. ಅಂತೂ ಮಹಿಳೆಯರು ಮತ್ತು ಸಮಾಜದ ನಿಮ್ನ ವರ್ಗಗಳಿಂದ ಬಂದ ಸಾಮಾನ್ಯರು ಕೂಡ ಎಂತಹ ಬೌದ್ಧಿಕ, ಆಧ್ಯಾತ್ಮಿಕ ಎತ್ತರಕ್ಕೇರ ಬಲ್ಲರೆಂಬುದನ್ನು ಹನ್ನೆರಡನೆಯ ಶತಮಾನದ ಕ್ರಾಂತಿ ನಿಚ್ಚಳವಾಗಿ ನಿದರ್ಶಿಸಿತು. ಹೆಣ್ಣು ಗಂಡಿನ ಪಾಲಿಗೆ ಕೇವಲ ಕಾಮದ ಗೊಂಬೆಯಲ್ಲ ಅಥವಾ ಸಹಧರ್ಮಿಣಿ ಮಾತ್ರವಲ್ಲ, ಅವಳು ಅವನ ಬದುಕಿನಲ್ಲಿ ಬೌದ್ಧಿಕವಾಗಿ ಭಾಗವಹಿಸುವ 'ವಿಚಾರ ಪತ್ನಿ' ಕೂಡ ಆಗಬಲ್ಲಳು, ಆಗಬೇಕು ಎಂಬುದು ಅಂದು ಸಿದ್ಧವಾದ ಸತ್ಯ.

ಕಾಯಕದಂತೆಯೆ ಜಂಗಮ ಎಂಬುದೂ ಶರಣರಿತ್ತ ಒಂದು ಘನವಾದ ಮೌಲ್ಯ. ಎರಡೂ ಒಟ್ಟಿಗೇ ಹೋಗುತ್ತವೆ. ಜಂಗಮದಾಸೋಹವೆ ಕಾಯಕದ ಮುಖ್ಯ ಧ್ಯೇಯವಾಗಿತ್ತು ಎಂಬುದನ್ನು ನೆನೆಯಬಹುದು. ಈಗ ಜಂಗಮ ಎಂಬುದನ್ನು ಇನ್ನೂ ವ್ಯಾಪಕವಾದ ಅರ್ಥದಲ್ಲಿ ಸಂಭಾವಿಸಬೇಕಾಗುತ್ತದೆ. "ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ" ಎಂಬ ಬಸವಣ್ಣನವರ ಸೂತ್ರ ಈ ದಿಶೆಯಲ್ಲಿ ಪೂರಕವಾಗಬಲ್ಲದು. ಸ್ಥಾವರ ಎಂದರೆ ಜಡವಾದದ್ದು; ಜಂಗಮವಾದರೊ ಚೈತನ್ಯದ, ಚಲನಶೀಲತೆಯ, ಬೆಳವಣಿಗೆಯ, ನಿರಂತರತೆಯ ದ್ಯೋತಕ. ಈ ದೃಷ್ಟಿಯಿಂದ ಜಂಗಮತೆ ಸಮಾಜದ ಲಕ್ಷಣವಾಗಬೇಕು. ಎಲ್ಲ ಬಂಡಾಯಗಳು, ಕ್ರಾಂತಿಗಳು ದುಡಿಯುವುದು ಅದನ್ನು ಸಾಧಿಸುವುದಕ್ಕಾಗಿಯೆ,

ಶರಣರು ವೀರಶೈವಮರ್ಧಪ್ರಚಾರಕ್ಕಾಗಿ, ಜನಜಾಗೃತಿಗಾಗಿ, ಸಮಾಜ ಪರಿವರ್ತನೆಗಾಗಿ ಹೊಸ ಮಾಧ್ಯಮವೊಂದನ್ನು ಕಂಡುಕೊಂಡರು; ಅದೇ ವಚನ. ತಿರುಳಿನಂತೆ ವಾಹಕವೂ ನೂತನವಾಗುವುದು ಅನಿವಾರ್ಯವಾಗಿತ್ತು. ಅದು ಇತ್ತ ಗದ್ಯವೂ ಅಲ್ಲದ, ಅತ್ತ ಪದ್ಯವೂ ಅಲ್ಲದ, ಆದರೆ ಪದ್ಯಗಂಧಿಯಾದ ಪ್ರಕಾರ. ಗದ್ಯ, ಪದ್ಯಗಳ ಸಮನ್ವಯ ಎನ್ನಬಹುದಾದ ಈ ಪ್ರಕಾರ ವಚನಕಾರರ ಸಮನ್ವಯದೃಷ್ಟಿಗೆ ಅನುರೂಪವಾದದ್ದು.

ವಚನವೊಂದು ಅಚ್ಚಗನ್ನಡ ಮಾಧ್ಯಮ; ಅದರಲ್ಲಿರುವುದು ಜನಭಾಷೆ. ಸಂಸ್ಕೃತ ಅಲ್ಲಿ ಇಲ್ಲವೆಂದಲ್ಲ; ಆದರೆ ಅದು ಕೂಡ ಕನ್ನಡವೇ ಎನಿಸುವಷ್ಟು ಪರಿಚಿತವಾದದ್ದು. ಕನ್ನಡ ಭಾಷೆಯ ಸಮಸ್ತ ಸುಪ್ತ ಶಕ್ತಿಯನ್ನೂ ವಚನಕಾರರು ಎಚ್ಚರಿಸಿ, ಅದ್ಭುತ ರೀತಿಯಲ್ಲಿ ಬಳಸಿಕೊಂಡರು. ಅಷ್ಟೆ ಅಲ್ಲ, ಅದಕ್ಕೆ ಹೊಸ ಆಯಾಮಗಳನ್ನೂ ಅಳವಡಿಸಿದರು. ಅವರ ಆದಾನ ಪ್ರದಾನ ಸಾಮರ್ಥ್ಯ ವಚನರಚನೆಯಲ್ಲಿ ಸುವ್ಯಕ್ತವಾಗಿದೆ.

ಮಾತಿಗೆ ಮೀರಿದ ಸುಸೂಕ್ಷ್ಮವಾದ ಅನುಭವಗಳು ಕೂಡ - ಅವುಗಳನ್ನು ಅನುಭಾವ ಎನ್ನುವುದೆ ಯುಕ್ತ - ಕನ್ನಡದಲ್ಲಿ ಮೈ





ಪಡೆದುಕೊಳ್ಳುವ ಸೋಜಿಗದ ಸಿದ್ಧಿಯನ್ನು ವಚನಗಳಲ್ಲಿ ಕಾಣುತ್ತೇವೆ. ಅತೀಂದ್ರಿಯವಾದ ಆಧ್ಯಾತ್ಮದ ಅಭಿವ್ಯಕ್ತಿಯೂ ಕನ್ನಡದಲ್ಲಿ ಸಾಧ್ಯ ಎಂದು ವಚನಕಾರರು ಪ್ರತ್ಯಕ್ಷೀಕರಿಸಿರುವಾಗ, ವೈಜ್ಞಾನಿಕ ವಿಷಯಗಳನ್ನು ಕನ್ನಡ ಮಾಧ್ಯಮದಲ್ಲಿ ಸಂವಹನಗೊಳಿಸುವುದು ಕಷ್ಟವೆಂದು ಇಂದು ಹಲವರು ಹೇಳುವುದು ವ್ಯರ್ಥಾಲಾಪ ಎನಿಸುವುದಿಲ್ಲವೆ?

ಪ್ರತಿಯೊಂದು ವಚನದ ಅಂತ್ಯದಲ್ಲೂ ಆಯಾ ವಚನಕಾರರ ಅಥವಾ ವಚನಕಾರ್ತಿಯ ಅಂಕಿತವಿರುವುದೊಂದು ವಿಶೇಷ. ತನ್ನ ಇಷ್ಟದೈವಕ್ಕೆ, ಆತ್ಮಸಾಕ್ಷಿಗೆ ಮುಖಾಮುಖಿಯಾಗಿ ಆಯಾ ವ್ಯಕ್ತಿ ತನ್ನ ಅಂತರಂಗವನ್ನು ತೋಡಿಕೊಳ್ಳುವ ಪರಿ ಇಲ್ಲಿದೆ. ತಾವು ಹೇಳುವುದನ್ನು ಪ್ರಮಾಣೀಕರಿಸುವುದಕ್ಕಾಗಿ ಅವರು ಕಡೆಯಲ್ಲಿ ಲಿಂಗದಿವ್ಯವನ್ನು ಹಿಡಿಯುವ ಪ್ರಕ್ರಿಯೆ ಅಂಕಿತದಿಂದ ಸಂಕೇತಿತವಾಗುತ್ತದೆ. ಎಂತಲೇ ಪ್ರತಿಯೊಂದು ವಚನವೂ ಪ್ರಾಮಾಣಿಕ, ಅಧಿಕೃತ. ಅದೊಂದು ಮೀಸಲು ಪ್ರಕಾರ; ಅಂದಿನ ವಚನಕಾರರ ಪಾಲಿಗೆ ಅನನ್ಯ ಪ್ರಣಾಳಿಕೆ. ಆದರೆ ಇಂದಿನ ವಚನಕಾರರಿಗೆ ಅದು ಅನಿವಾರ್ಯವಲ್ಲದ, ಅನುಕರುಣೆಯ ವಸ್ತು ಮಾತ್ರ.

ವಚನಗಳು ಸಾಹಿತ್ಯವಾಗಬೇಕೆಂದು ಮೂಲತಃ ಉದ್ದಿಷ್ಟವಾದವಲ್ಲ; ಆದರೂ ಅವುಗಳ ಕಾವ್ಯತತ್ತ್ವ ಅಸಾಧಾರಣವಾದುದು. ಸಾಹಿತ್ಯರಚನೆಯ ನಿಲುವಿನಿಂದ ರಚಿತವಾದ ಅಸಂಖ್ಯ ಕೃತಿಗಳು ಸಾಹಿತ್ಯ ಚರಿತ್ರೆಯಲ್ಲಿ ನೀರಸವಾಗಿ ಸಾಲುಗಟ್ಟಿ ನಿಂತಿರುವಾಗ, ಈ ವಚನವಿದ್ಯಮಾನ ಸ್ವಾರಸ್ಯದ ಸಂಗತಿ; ವಿಸ್ಮಯದ್ದು ಕೂಡ. ಇದಕ್ಕೇನು ಕಾರಣ? ವಚನಕಾರರು ಸೌಂದರ್ಯಮೌಲ್ಯಕ್ಕೆ ಗುರಿಯಿಡದೆ, ಶಿವಮೌಲ್ಯವನ್ನು ಹಿಡಿದು ನುಡಿದರು; ಅವರ ನುಡಿಗೆ ಅಯಾಚಿತವಾಗಿ, ಸಹಜವಾಗಿ ಸೌಂದರ್ಯ ಒಲಿದು ಬಂತು.

ರಾಜಾಸ್ಥಾನದಲ್ಲಿ ಪ್ರಾಶಸ್ತ್ಯವಿದ್ದುದು 'ಕವಿ ಗಮಕಿ ವಾದಿ ವಾಗ್ಮಿ' ಗಳಿಗೆ. ವಚನಕಾರರು ಈ ವ್ಯವಸ್ಥೆಯನ್ನು ವಿರೋಧಿಸಿ, ಭಕ್ತಿಗೆ ಅಗ್ರಸ್ಥಾನ ಕೊಡುತ್ತಾರೆ; ಅದನ್ನು ಪರಮಮೌಲ್ಯವನ್ನಾಗಿ ಪ್ರತಿಪಾದಿಸುತ್ತಾರೆ. ಬಸವಣ್ಣನವರ ಈ ವಚನಗಳನ್ನು ಲಕ್ಷಿಸಬಹುದು:

ಮಾತು ಬಲ್ಲಾತ ಜಾಣನಲ್ಲ,
ಗೀತವ ಬಲ್ಲಾತ ಜಾಣನಲ್ಲ,
ಲಿಂಗವ ನೆರೆ ನಂಬಿದಾತ, ಆತ ಜಾಣನು!
ಗೀತವ ಹಾಡಿದೊಡೇನು?
ಶಾಸ್ತ್ರ ಪುರಾಣವ ಕೇಳಿದೊಡೇನು?
ವೇದ ವೇದಾಂತವನೋದಿದೊಡೇನು?...
ಭಕ್ತಿಯಿಲ್ಲದವರನೊಲ್ಲ ಕೂಡಲ ಸಂಗಮದೇವ.

ಆಡಿದರೇನೊ ಹಾಡಿದರೇನೊ ಓದಿದರೇನೊ..
ತ್ರಿವಿಧದಾಸೋಹವಿಲ್ಲದನ್ನಕ್ಕ?
ಆಡದೇ ನವಿಲು, ಹಾಡದೇ ತಂತಿ? ಓದದೇ ಗಿಳಿ?
ಭಕ್ತಿಯಿಲ್ಲದವರನೊಲ್ಲ ಕೂಡಲ ಸಂಗಮದೇವ.

ಕಾವ್ಯ, ಸಂಗೀತ, ನೃತ್ಯಾದಿ ಕಲೆಗಳಲ್ಲಿನ ಪರಿಣತಿಯಾಗಲಿ ಶಾಸ್ತ್ರಜ್ಞಾನ ಪಾಂಡಿತ್ಯಗಳಾಗಲಿ ನಿಷ್ಪ್ರಯೋಜಕ; ಭಕ್ತಿಯೊಂದೆ ಶ್ರೇಷ್ಠ ಮತ್ತು ತಾರಕ ಎಂಬುದು ಬಸವಣ್ಣನವರ ನಿಲುವು. "ನುಡಿದರೆ ಲಿಂಗ ಮೆಚ್ಚಿ ಅಹುದೆನಬೇಕು", "ಕೂಡಲ ಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು" ಎಂಬ ಮಾತುಗಳನ್ನೂ ಗಮನಿಸಬೇಕು. ಆದರೆ ಕಲಾಮೌಲ್ಯಗಳನ್ನು ಭಕ್ತಿ, ಅನುಭಾವಗಳ ಮೌಲ್ಯ ನಿರಾಕರಿಸಬೇಕೆಂದೇನೂ ಇಲ್ಲ; ಅದು ಅವುಗಳನ್ನೊಳಗೊಂಡು, ಅವುಗಳಿಂದ ಕಪ್ಪ ಒಪ್ಪಿಸಿಕೊಂಡು, ಸಾರ್ವಭೌಮ ಭಂಗಿಯಲ್ಲಿ ನಿಲ್ಲಬಹುದು. ಶರಣ ವಚನಗಳು ಇದಕ್ಕೆ ಸುಸಾಕ್ಷಿ.

ಈ ದೃಷ್ಟಿಯಿಂದ ಅಕ್ಕಮಹಾದೇವಿಯ ಈ ಉದ್ಗಾರವನ್ನೂ ಲೆಕ್ಕಿಸಬಹುದು : "ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗಾನೊಲಿದೆನವ್ವಾ!" ಭಗವತ್ ಸ್ವರೂಪವನ್ನು ಅಕ್ಕ ಇಲ್ಲಿ ನಿರೂಪಿಸುತ್ತಿದ್ದಾಳೆ. ಶಬ್ದಕ್ರಮವನ್ನು ಎಚ್ಚರಿಕೆಯಿಂದ ಲಕ್ಷಿಸಬೇಕು. ದೇವನಿಗೆ ಸಾವಿಲ್ಲ, ಕೇಡಿಲ್ಲ, ರೂಹಿಲ್ಲ; ಆದ್ದರಿಂದಲೆ ಅವನು ಚೆಲುವನೂ ಹೌದು. ಇದು ಸಾಮಾನ್ಯ ಕಲ್ಪನೆಗೆ ವಿರುದ್ಧವಾದ ಮಾತು. ಚೆಲುವುಳ್ಳ ವಸ್ತು ಸಾವಿಲ್ಲದ್ದು, ಕೇಡಿಲ್ಲದ್ದು ಎಂಬುದು ಸಾಮಾನ್ಯರ ಭ್ರಮೆ. ಆದರೆ ಹಾಗಲ್ಲ. ಶಿವ ಇದ್ದಲ್ಲಿ ಸೌಂದರ್ಯವಿರುತ್ತದೆ; ಶಿವದಿಂದಲೆ ಸೌಂದರ್ಯ ನಿಷ್ಪನ್ನವಾಗುತ್ತದೆ, ಸೌಂದರ್ಯದಿಂದ ಶಿವವಲ್ಲ. ಅಕ್ಕನ ವಿಶೇಷಣಗಳನ್ನು ಹಿಂದೆ ಮುಂದೆ ಮಾಡುವಂತಿಲ್ಲ; ಅವು "Best words in the best order."

ಪ್ರಾಚೀನ ಕಾವ್ಯಮೀಮಾಂಸೆಯಾಗಬಹುದು. ಆಧುನಿಕ ಕಾವ್ಯತತ್ತ್ವವಾಗಬಹುದು - ಯಾವ ಒರೆಗಲ್ಲಿನ ಮೇಲಾದರೂ ತಮ್ಮ ಸಾಚಾತನವನ್ನು ವಚನಗಳು ಅನಾಯಾಸವಾಗಿ, ಅಸಂದಿಗ್ಧವಾಗಿ ಸಾಬೀತುಪಡಿಸಿಕೊಳ್ಳುತ್ತವೆ. ಪ್ರಾಚೀನ ಸಾಹಿತ್ಯವನ್ನು ಅನುಮಾನದ ಕಣ್ಣಿನಿಂದ ನೋಡುವವರೂ ವಚನಗಳ ಉತ್ಕೃಷ್ಟತೆಯನ್ನು ಮುಕ್ತ ಮನಸ್ಸಿನಿಂದ ಒಪ್ಪಿಕೊಳ್ಳುತ್ತಾರೆ.

ಪ್ರಾಚೀನ ಕಾವ್ಯತತ್ತ್ವ ಪುರಸ್ಕರಿಸುವ ವಿವಿಧ ಅರ್ಥಾಲಂಕಾರ ಶಬ್ದಾಲಂಕಾರಗಳು, ರಸಧ್ವನಿಗಳು, ಅಷ್ಟೆ ಅಲ್ಲ, ಚಿತ್ರಕಾವ್ಯದ ಕೆಲವು ಮಾದರಿಗಳು ಕೂಡ ವಚನಗಳಲ್ಲಿ ಗೋಚರಿಸುತ್ತದೆ.* ಹಾಗೆಯೆ,

ಅರ್ವಾಚೀನ ಕಾವ್ಯವಿಮರ್ಶೆಯಲ್ಲಿ ಪ್ರಚಲಿತವಾದ ಸಂಕೀರ್ಣತೆ, ಪ್ರತಿಮಾ ಪ್ರತೀಕ ಸಂಕೇತ ವಿಧಾನಗಳು, ನಾಟಕೀಯತೆ, ಭಾಷೆಯಲ್ಲಿ ಭಾವಾಭಿನಯ, ಅಡುಮಾತಿನ ಲಯ ಇತ್ಯಾದಿಗಳೂ ಅಲ್ಲಿ ನಿದರ್ಶಿತವಾಗುತ್ತವೆ. ತಮಗಿಂತ ಹಿಂದೆ ಸಾಹಿತ್ಯದ ಪ್ರಪಂಚದ ಮುಖವನ್ನೆ ಕಂಡರಿಯದಿದ್ದ ವಸ್ತುಗಳನ್ನೂ ಪ್ರಾಣಿಗಳನ್ನೂ ವಚನಕಾರರು ಉಪಮೆ ರೂಪಕ ಪ್ರತಿಮೆಗಳನ್ನಾಗಿ ದುಡಿಸಿಕೊಳ್ಳುತ್ತಾರೆ; ಅದೊಂದು ಅನಂತ ವೈವಿಧ್ಯಪೂರ್ಣ ಲೋಕ. ತಮ್ಮತಮ್ಮವೃತ್ತಿಗಳನ್ನೆ ರೂಪಕ ಮಾಡಿಕೊಂಡು ತಮ್ಮಅಂತರಂಗಕ್ಕೆ ಅಭಿವ್ಯಕ್ತಿಕೊಟ್ಟಿರುವ ವಚನಕಾರರೂ ಉಂಟು. ಈ ಎಲ್ಲ ಕಾರಣಗಳಿಂದ ವಚನಗಳು ಇಂದಿಗೂ ಅತ್ಯಂತ ನವ್ಯವಾಗಿ, ಜೀವ ಸಂಪನ್ನವಾಗಿ ಕಂಗೊಳಿಸುತ್ತದೆ.

ಅಮೂರ್ತವನ್ನು ಮೂರ್ತಗೊಳಿಸುವುದರಲ್ಲಿ, ಬಯಲನ್ನು ರೂಪ ಮಾಡುವುದರಲ್ಲಿ ವಚನಕಾರರ ದಕ್ಷತೆ ದೊಡ್ಡದು. ಒಂದು ಸಣ್ಣ ಉದಾಹರಣೆಯನ್ನಷ್ಟೆ ಇಲ್ಲಿ ಗಣಿಸಬಹುದು. "ಕಪ್ಪೆ ಸರ್ಪನ ನೆಳಲಲ್ಲಿ ಇಪ್ಪಂತೆ ಎನಗಾಯಿತ್ತಯ್ಯಾ" ಎಂಬ ಬಸವಣ್ಣನವರ ವಚನದಲ್ಲಿ ಹೇಗೆ ಮೃತ್ಯುವಿನ ಘೋರ ಭೀಕರತೆ ಒಂದು ಸುಮೂರ್ತ ಚಿತ್ರದ ಮೂಲಕ ಧ್ವನಿತವಾಗುತ್ತದೆಂಬುದನ್ನು ಪರಿಭಾವಿಸಬೇಕು. ಕಪ್ಪೆ, ನೆರಳು, ಸರ್ಪಗಳ ರೂಪಕಗಳಲ್ಲಿ ಇಡೀ ಬದುಕನ್ನೆ ಅಡಗಿಸಿದೆ, ಬಸವ ಪ್ರತಿಭೆ. ಒಂದು ಕಡೆ "ಕತ್ತೆ ಕುದುರೆಗೆ ಹುಟ್ಟಿದ ವೇಸರನಂತೆ" ಎನ್ನುವಲ್ಲಿ ಅವರು ಕೊಡುವ ಹೇಸರಕತ್ತೆಯ ಹೋಲಿಕೆ ಎಷ್ಟು ನವೀನ ಮತ್ತು ಅರ್ಥಪೂರ್ಣ!

ಇನ್ನು ಸಂಕೀರ್ಣತೆಯನ್ನು ತೆಗೆದುಕೊಂಡರೆ, ಜೇಡರ ದಾಸಿಮಯ್ಯನ "ಸತಿಪತಿಗಳೊಂದಾಗದವರ ಭಕ್ತಿ ಅಮೃತದೊಳಗೆ ವಿಷ ಬೆರೆದಂತೆ ಕಾಣಾ" ಎಂಬೊಂದು ಮಾತು ಇಲ್ಲಿ ಸಾಕು. ಅಮೃತಾಂಶವಿರುವುದರಿಂದ ಸಾಯುವಂತಿಲ್ಲ, ವಿಷಾಂಶ ವಿರುವುದರಿಂದ ಬದುಕುವುದೂ ಶಕ್ಯವಿಲ್ಲ! ವಿರಸ ದಾಂಪತ್ಯ ಭಯಂಕರ ದುರಂತಸ್ಥಿತಿ ಯಶಸ್ವಿಯಾಗಿ ಪ್ರತೀತವಾಗುತ್ತದೆ.

"ಮೂರ್ತಿಯಾದುದಕ್ಕೆ ಪ್ರಳಯ ತಪ್ಪದು" ಎಂಬುದು ಅಲ್ಲಮನ ಉಕ್ತಿ ("ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ" ಎಂಬ ಬಸವೋಕ್ತಿಗೆ ಸಂವಾದಿಯಾದದ್ದು). ಆದರೆ ಸಾಹಿತ್ಯಕ್ಕೆ ಇದು ಅನ್ವಯಿಸುವುದಿಲ್ಲ; ಏಕೆಂದರೆ ರೂಪವಿಲ್ಲದೆ ಸಾಹಿತ್ಯ ಸಿದ್ಧಿಸದು. ಶರಣರು ತಮ್ಮ ಅನಿಸಿಕೆಗಳಿಗೆ ವಾಗ್ರೂಪ ಕೊಟ್ಟಿದ್ದಾರೆ. ಆದರೂ ಅವರ ಅಭಿವ್ಯಕ್ತಿ "ಶಬ್ದದೊಳಗಣ ನಿಶ್ಯಬ್ದ"ಕ್ಕೆ ನಿಷ್ಠವಾದದ್ದು; "ನುಡಿಯಿಲ್ಲದ ನಿಸ್ಸೀಮ ಗ್ರಾಮ" ದತ್ತ ತುಡಿಯುವಂಥದು. ವಚನಗಳು ರೂಪಸಹಿತವಾಗಿಯೂ ಜಂಗಮಶಕ್ತಿಯಾಗಿವೆ ಎಂಬುದನ್ನು ಗಮನಿಸಬೇಕು. ಪ್ರಾಯಃ ರೂಪ-ಅರೂಪಗಳ ಸಾಮರಸ್ಯದಲ್ಲಿದೆ, ಶರಣರ ಸಿದ್ಧಿ; ಅವರು ಮಾತನ್ನು ಜ್ಯೋತಿರ್ಲಿಂಗವಾಗಿಸಿದರು.

ಅಲ್ಲಮಪ್ರಭುವಿನ ವಚನವೊಂದರಿಂದ ಮುಗಿಸಬಹುದು :

ಕೆಂಡದ ಮಳೆ ಕರೆವಲ್ಲಿ ಉದಕವಾಗಿರಬೇಕು;
ಜಲಪ್ರಳಯವಾದಲ್ಲಿ ವಾಯುವಿನಂತಿರಬೇಕು;
ಮಹಾಪ್ರಳಯವಾದಲ್ಲಿ ಆಕಾಶದಂತಿರಬೇಕು;
ಜಗತ್ಪ್ರಳಯವಾದಲ್ಲಿ ತನ್ನ ತಾ ಬಿಡಬೇಕು,
ಗುಹೇಶ್ವರಲಿಂಗ ತಾನಾಗಿರಬೇಕು.

ಪ್ರಭುವಾಣಿ ಲೌಕಿಕಕ್ಕೂ ಅನ್ವಯಿಸುತ್ತದೆ; ಪಾರಮಾರ್ಥಿಕಕ್ಕೂ ಅನ್ವಯಿಸುತ್ತದೆ. ಇದು, ಅದ್ವೈತದ ಔನ್ನತ್ಯದಲ್ಲಿ ನಿಂತು ಆಡಿದ ಮಾತಾದರೂ, ಸಾಮಾನ್ಯರಿಗೆ ಕೂಡ ಅತ್ಯುಪಯುಕ್ತ. ಬದುಕಿಗೆ ಕೆಚ್ಚು ನೆಚ್ಚು ನಂಬಿಕೆಗಳನ್ನು ತುಂಬುವ, ಜೀವನ ಸಂಗ್ರಾಮಕ್ಕೆ ವ್ಯಕ್ತಿಯನ್ನು ಅಣಿಗೊಳಿಸುವ ಪ್ರಚಂಡ ತೂರ್ಯನಿನಾದ ಇಲ್ಲಿದೆ. ಇದಕ್ಕಿಂತ ಮಿಗಿಲಾದ ಮೌಲ್ಯವಾಗಲಿ ಸಂದೇಶವಾಗಲಿ ಇನ್ನೊಂದಿರಲಾರದು. ಇದು ಲೋಕಕ್ಕೆ ಶರಣರ ಕೊಡುಗೆ.

●

ಆಶೆಯನ್ನು ಕಡಿದೊಗೆ, ಕ್ಷಮೆಯನ್ನು ತಳೆ, ಸೊಕ್ಕನ್ನು ಬಿಡು, ಪಾಪಕಾರ್ಯದಲ್ಲಿ ಮನಸ್ಸು ಹಾಕಬೇಡ, ಸತ್ಯವನ್ನು ನುಡಿ, ಸಜ್ಜನರ ದಾರಿಯಲ್ಲಿ ಕ್ರಮಿಸು, ವಿದ್ವಾಂಸರ ಸೇವೆಗೈ, ಹಿರಿಯರನ್ನು ಗೌರವಿಸು, ಶತ್ರುಗಳನ್ನೂ ಮರ್ಯಾದಿಸು, ನಿನ್ನ ಗುಣಗಳನ್ನು ಮುಚ್ಚಿಡು, ಕೀರ್ತಿಯನ್ನು ಕಾಯ್ದುಕೋ, ದುಃಖಿತರಲ್ಲಿ ದಯೆದೋರು - ಇವೆಲ್ಲ ಸಜ್ಜನರ ಲಕ್ಷಣಗಳು.

-- ನೀತಿಶತಕ

ಮರವಿದ್ದು ಫಲವೇನು ನೆಳಲಿಲ್ಲದನ್ನಕ್ಕ?
ಧನವಿದ್ದು ಫಲವೇನು ದಯವಿಲ್ಲದನ್ನಕ್ಕ?
ಹಸುವಿದ್ದು ಫಲವೇನು ಹಯನಿಲ್ಲದನ್ನಕ್ಕ?
ರೂಪಿದ್ದು ಫಲವೇನು ಗುಣವಿಲ್ಲದನ್ನಕ್ಕ?
ಅಗಲಿದ್ದು ಫಲವೇನು ಮನವಿಲ್ಲದನ್ನಕ್ಕ?
ನಾನಿದ್ದು ಫಲವೇನು ನಿಮ್ಮ ಜ್ಞಾನವಿಲ್ಲದನ್ನಕ
ಚೆನ್ನಮಲ್ಲಿಕಾರ್ಜುನ

-- ಅಕ್ಕಮಹಾದೇವಿ





# ಕೃಷಿ ಗಾದೆಗಳು

-- ಗೊ. ರು. ಚನ್ನಬಸಪ್ಪ
ಅಧ್ಯಕ್ಷರು
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು

ಗಾದೆಗಳು ಲೋಕಾನುಭವದ ರಸಪಾಕ. ಅವು ಇದ್ದಕ್ಕಿದ್ದಂತೆ ಸೃಷ್ಟಿಯಾದವುಗಳಲ್ಲ. ಅನೇಕ ವರ್ಷಗಳ ಅನುಭವದ ಮೂಸೆಯಿಂದ ಮೂಡಿ ಬಂದ ನುಡಿಗೊಂಚಲುಗಳು. ಗಾದೆ ಮಾತುಗಳ ವಾಕ್ಯ ರಚನೆಯದೇ ಒಂದು ಸೊಗಸು. ಅವು ಆಡಲಿಕ್ಕೆ ಬಳಸಲಿಕ್ಕೆ ಬಲು ಸುಲಭ. ನೆನಪಿನಲ್ಲಿ ಉಳಿಯಲಿಕ್ಕೂ ಅಷ್ಟೇ ಸರಳ ಎಂಬುದನ್ನು ನಾಡಿನ ಹಿರಿಯ ಜಾನಪದ ವಿದ್ವಾಂಸರಲ್ಲಿ ಒಬ್ಬರಾದ ಶ್ರೀ ಗೊ.ರು.ಚ. ಅವರು ಪ್ರಸ್ತುತ ಲೇಖನದಲ್ಲಿ ಪರಿಚಯಮಾಡಿಕೊಟ್ಟಿದ್ದಾರೆ.

ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆ ಲೇಸು. ಇದು ಕೃಷಿ ಗಾದೆಗಳಿಗೆ ನಾಂದಿಯಿದ್ದಂತೆ. ನಮ್ಮ ಬೇಸಾಯದ ಬಂಧುಗಳ ನಿತ್ಯದ ಮಾತುಕತೆಗಳಲ್ಲಿ ಗಾದೆಗಳು ತಾವಾಗಿ ನಲಿಯುತ್ತವೆ. ಅವರ ಮಾತು ಮಾತಿಗೂ ಗಾದೆಗಳು ನಮಗೆ ಕಾಣಸಿಗುತ್ತವೆ.

ಹತ್ತು ಮಾತುಗಳಲ್ಲಿ ಹೇಳಬಹುದಾದ್ದನ್ನು ಒಂದು ಗಾದೆ ಮಾತು ಹೆಚ್ಚು ಪರಿಣಾಮಕಾರಿಯಾಗಿ ಹೇಳ ಬಲ್ಲದು. ಹಾಗೆಯೇ, ಒಂದು ಗಾದೆ ಮಾತನ್ನು ವಿವರಿಸಬೇಕಾದರೆ ಹತ್ತು ಮಾತುಗಳೇ ಬೇಕಾಗಬಹುದು. ಗಾದೆಗಳ ವೈಶಿಷ್ಟ್ಯವೆಂದರೆ ಅವುಗಳಲ್ಲಿ ಅಡಗಿರುವ ಸ್ವಾರಸ್ಯ, ಕೇಳಲಿಕ್ಕೂ ಚಂದ, ಹೇಳಲಿಕ್ಕೂ ಚಂದ. ಅವು ಕಿವಿಗೆ ಒಂದು ರೀತಿ ಒಗಟಿನಂತೆ ಕೇಳಿದರೂ, ಅರ್ಥ ಕಷ್ಟವೇನಲ್ಲ.

ಬೇಸಾಯ ಅಥವಾ ಒಕ್ಕಲುತನ ಮಾಡುವ ನಮ್ಮ ಹಳ್ಳಿಗರು ಈ ಗಾದೆಗಳ ಕಣಜವೇ ಆಗಿದ್ದಾರೆ. ಅವರು ಮಾಡುವ ಬೇಸಾಯ ಕಾಯಕಕ್ಕೆ ಸಂಬಂಧಿಸಿದಂತೆಯೇ ಸಾವಿರಾರು ಗಾದೆಗಳು ಸಿಕ್ಕುತ್ತವೆ.



'ಹದ ನೋಡಿ ಹರಗು ; ಬೆದೆ ನೋಡಿ ಬಿತ್ತು'

## ದುಡಿಮೆ

ಬೇಸಾಯಕ್ಕೆ ಮೊದಲು ಆಧಾರ ಬೆಳೆ ಕೊಡುವ ಭೂಮಿ. ರೈತ ಎದ್ದ ಕೂಡಲೆ ಭೂತಾಯಿಯನ್ನು ನೆನದೇ ತನ್ನ ಕಾಯಕದಲ್ಲಿ ತೊಡಗುವುದು.ಮಣ್ಣನ್ನು ನಂಬಿಯೇ ಬದುಕಿರುವ ರೈತ, 'ಒಕ್ಕು ಇಲ್ಲದಿದ್ದರೆ ಮಣ್ಣು ಮುಕ್ಕು' ಎನ್ನುತ್ತಾನೆ. ಅಂದರೆ ಉತ್ತು ಬಿತ್ತುವ ಕೆಲಸ ಮಾಡಿದರೆ ನಿನ್ನ ಹೊಟ್ಟೆಗೆ ಹಿಟ್ಟು, ಇಲ್ಲವಾದರೆ ನೀನು ಮಣ್ಣನ್ನೇ

ತಿನ್ನಬೇಕಾಗುತ್ತದೆ ಎಂದು ಹೇಳುವ ಈ ಗಾದೆ ಮಾತು ಎಷ್ಟು ಅರ್ಥಪೂರ್ಣವಾಗಿದೆ ನೋಡಿ, ಎಷ್ಟು ಸಹಜವಾಗಿದೆ ನೋಡಿ. ಈ ಒಂದು ಸಾಲಿನ ಗಾದೆಯಲ್ಲಿ ದುಡಿಮೆಯ ಅಗತ್ಯವನ್ನು ನೇರವಾಗಿ ತಿಳಿಸುತ್ತಾನೆ ನಮ್ಮ ರೈತ!

ಹಾಗೆಯೇ ಮಣ್ಣನ್ನು ಕುರಿತಂತೆ, 'ನೆಲಕ್ಕೆ ಹಾಕಿದವ ಬದುಕಿದ', 'ನಾಡು ಬೆಳೆದರೆ ಹಾಡಿ ಕುಣಿಯಬಹುದು', 'ಕೈ ಬಂಜೆಯಾದರೂ ಭೂಮಿ ಬಂಜೆಯಲ್ಲ', 'ದೊರೆಕೊಟ್ಟ ಹಾಲಿಗಿಂತ ಧರಣಿ ಕೊಟ್ಟು ಹಾಲು ಲೇಸು' - ಎಂದೆಲ್ಲ ಗಾದೆಗಳಿವೆ.



'ಎತ್ತುಗಳು ರೈತನ ದೈವ - ಧನವಿಲ್ಲದಿದ್ದರೂ ದನವಿರಬೇಕು'

**ರೈತನ ವೃತ್ತಿ ಬಗ್ಗೆ**

ಒಕ್ಕಲುತನದ ಕಸುಬಿನ ಬಗ್ಗೆ ಬಳಕೆಯಲ್ಲಿರುವ ಗಾದೆಗಳು ವೈವಿಧ್ಯಪೂರ್ಣವಾಗಿವೆ. 'ಆರಂಭಕ್ಕೆ ಒಗ್ಗಿದವ ಬರದಲ್ಲೂ ಗೆದ್ದ'. 'ಆರಂಭಗಾರನಾಗಿ ಅರಣ್ಯದಲ್ಲೂ ಬಾಳಬಹುದು', 'ನೆಲ ಬಲವಂತನಿಗೆ - ಕುಲ ಶೀಲವಂತನಿಗೆ', 'ಬೆಳೆದರೇ ಬಾಳು-ಬೆಳೆಯದಿದ್ದರೆ ಹಾಳು', 'ರೈತನ ನೇಗಿಲು ನಾಡಿನ ಕಣ್ಣು', 'ರಾಜ ರೈತ ಕೂತರೆ ಆದೀತಾ' - ಇಂತಹ ಗಾದೆಗಳು ಒಕ್ಕಲುತನ ಪ್ರಾಮುಖ್ಯತೆಯನ್ನು, ಮಹತ್ವವನ್ನು ಅನಿವಾರ್ಯತೆಯನ್ನು ಸಾರುತ್ತವೆ.

**ಬೇಸಾಯದ ಬದುಕು**

ಆದರೆ ಬೇಸಾಯದ ಕೆಲಸ ಸುಲಭದ ಕೆಲಸವಲ್ಲ, 'ಬೇಸಾಯ, ನೀಸಾಯ, ಮನೆ ಮಂದಿಯೆಲ್ಲ ಸಾಯ' ಎಂಬ ಗಾದೆ ಮಾತಿದೆ. ಅಂದರೆ ಬೇಸಾಯಕ್ಕೆ ಒಬ್ಬಿಬ್ಬರಲ್ಲ, ಮನೆ ಮಂದಿಯೆಲ್ಲ ದುಡಿಯಬೇಕಾಗುತ್ತದೆ. ಗಂಡಸರು ಹೊಲ ಗದ್ದೆಗಳಲ್ಲಿ ಕೆಲಸ ಮಾಡುತ್ತಿದ್ದರೆ, ಹೆಂಗಸು ಮನೆಯಲ್ಲಿ ಸಾರಿಸಿ, ಗುಡಿಸಿ, ಅಡಿಗೆ ಮಾಡಿ ಹೊಲಕ್ಕೆ ಊಟ ಒಯ್ಯಬೇಕು. ಇನ್ನು ಹುಡುಗರು ದನಕರು, ಕುರಿ-ಮೇಕೆ ಮೇಯಿಸಬೇಕು. ಹೀಗೆ ಮನೆ ಮಂದಿಯೆಲ್ಲಾ ಕೆಲಸ ಮಾಡಿದರೇನೇ ಬೇಸಾಯದ ಬದುಕು ಸಾಗುವುದು.



'ಆಕಳಿದ್ದವನಿಗೆ ವ್ಯಾಕುಲವಿಲ್ಲ'

**ಕಾದ ನೆಲಕ್ಕೆ ಕಾಲದ ಮಳೆ**

ಎಷ್ಟೇ ಕಷ್ಟವಿದ್ದರೂ ರೈತ ತನ್ನ ಕೆಲಸ ಮಾಡಲು ಹಿಂಜರಿಯುವುದಿಲ್ಲ. ಆದರೆ ಅವನಿಗೆ ಕಾಲ ಕಾಲಕ್ಕೆ ಮಳೆ ನಡೆಸಿ ಕೊಡಬೇಕು. 'ಕಾದ ನೆಲಕ್ಕೆ ಕಾಲದ ಮಳೆ' ಬಂದರೆ ಆಯಿತು. ಏಕೆಂದರೆ 'ಅಸಲಿಲ್ಲದೆ ಬಡ್ಡಿಯಿಲ್ಲ, ಮಳೆಯಿಲ್ಲದೆ ಬೆಳೆಯಿಲ್ಲ', 'ಆಕಾಶದ ಮಳೆ,





*ಬೇಸಾಯ ಅಥವಾ ಒಕ್ಕಲುತನ ಮಾಡುವ ನಮ್ಮ ಹಳ್ಳಿಗಳು ಈ ಗಾದೆಗಳ ಕಣಜವೇ ಆಗಿದ್ದಾರೆ. ಅವರು ಮಾಡುವ ಬೇಸಾಯ ಕಾಯಕಕ್ಕೆ ಸಂಬಂಧಿಸಿದಂತೆಯೇ ಸಾವಿರಾರು ಗಾದೆಗಳು ಕಂಡು ಬರುತ್ತವೆ.*

ಭೂಮಿ ಬೆಳೆ', ಎನ್ನುವ ಆತನಿಗೆ 'ಮಳೆ ಬಿದ್ರೆ ಸೊಬಗು, ಇಲ್ಲದಿದ್ರೆ ಕೊರಗು' 'ಹದಕ್ಕೆ ಸರಿಯಾಗಿ ಮಳೆ ಆದರೆ ರೈತ ತನ್ನ ಹಜಾರವನ್ನ ಉತ್ತು ಬಿತ್ತಿಯಾನು', ಎಂಬ ಗಾದೆಯಿದೆ. ಆದರೆ ಮಳೆ ಬೇಕಿದ್ದರೂ ಹುಚ್ಚು ಮಳೆ ಬರಬಾರದು. ಮಳೆ ಬರಬೇಕು, ಬಿಸಿಲು ಕಾಯಬೇಕು. 'ಹುಚ್ಚು ಮಳೆ ಬಂದ್ರೂ ಕೇಡು, ಪೆಚ್ಚು ಮಗ ಹುಟ್ಟಿದ್ರೂ ಕೇಡು' ಹಾಗೆಯೇ, ಅರೆ ಬರೆ ಮಳೆ ಬಂದರೂ ಆಗದು. ಸರಿಯಾದ ಮಳೆ ಆಗದಿದ್ದರೆ 'ಆರು ತಿಂಗಳು ಉತ್ತರೂ ಮೂರು ಹೊತ್ತಿಗೆ ಹಿಟ್ಟಾಗದು'.

ಅವರ ಅನುಭವದಲ್ಲಿ 'ಮಂಜು ಮಳೆಯಲ್ಲ, ಮರಳು ಸಕ್ಕರೆಯಲ್ಲ'. ಅರಗಳಿಗೆ ಬಂದರೂ ಸುರಿ ಮಳೆ ಬರಬೇಕು. ಅದಕ್ಕೆ 'ಯೋಗವಿದ್ದರೆ ಮೇಘವೆಲ್ಲ ಮಳೆ'. ಎಂದು ನಂಬಿದ್ದಾನೆ ರೈತ. 'ಕ್ವಾಟೆ ಮೂಲೇಲಿ ಮಿಂಚಿದ್ರೆ ದಾಟಿ ಕೊಂಡಾದ್ರೂ ಮಳೆ ಬರುತ್ತೆ' ಎನ್ನುವುದು ಅವರಿಗೆ ಗೊತ್ತು. ಗುಡುಗುವ ಗುಡುಗು, ಮಿಂಚುವ ಮಿಂಚು, ಬೀಸುವ ಗಾಳಿ, ಚಲಿಸುವ ಮೋಡ - ಇವುಗಳನ್ನು ಗಮನಿಸಿಯೇ ನಮ್ಮ ರೈತರು ಮಳೆಯ ಆಗು-ಹೋಗುಗಳನ್ನು ತಿಳಿದುಕೊಳ್ಳಬಲ್ಲರು.

**ಮಳೆ ನಕ್ಷತ್ರಗಳು**

ಇನ್ನು ಶಾಸ್ತ್ರದ ನಕ್ಷತ್ರಗಳಿಗೆಲ್ಲ ಇರುವ ಮಳೆಗಳ ಬಗೆಗೆ ಅವರದೇ ಆದ ನಂಬಿಕೆಗಳಿವೆ. ಯಾವ ಯಾವ ಮಳೆ ಯಾವ ಯಾವಾಗ ಬರುತ್ತವೆ., ಹೇಗೆ ಬರುತ್ತವೆ, ಯಾವ ಮಳೆಯಿಂದ ಲಾಭ, ಯಾವ ಮಳೆಯಿಂದ ಹಾನಿ ಎಂಬುದನ್ನೆಲ್ಲ ಅವರು ಅನುಭವದ ಮೇಲೆ ತೀರ್ಮಾನಿಸಿದ್ದಾರೆ. ಅಶ್ವಿನಿ ಮಳೆ ಅವರ ದೃಷ್ಟಿಯಲ್ಲಿ ಸಸ್ಯನಾಶಿನಿ, 'ಅಶ್ವಿನಿ ಮಳೆ ಅರಿಶಿನಕ್ಕೆ ಮೇಲು, ಅಡಿಕೆ ತೆಂಗಿಗೆ ಕೇಡು'. ಹಾಗೆಯೇ 'ಭರಣಿ ಬಂಗಾರದ ಕರಣೆ'ಯಾಗುತ್ತದೆ. 'ಭರಣಿ ಬಂದರೆ ಧರಣಿ ಬದುಕುತ್ತದೆ' ಇನ್ನು ಕೃತ್ತಿಕಾ ಮಳೆಗೆ ಗಾಳಿ ಬೀಸುವುದೇ ಕುರುಹು. ಒಂದು ವೇಳೆ 'ಕೃತ್ತಿಕೆ ಮಳೆ ಬೀಳದಿದ್ದರೆ ಬಾಯಿಗೆ ಮೃತ್ತಿಗೆ' ಅಂದರೆ ಮಣ್ಣು ಎಂದು ಹೇಳುತ್ತಾರೆ. ರೋಹಿಣಿ ಮಳೆ ಸಮೃದ್ಧವಾಗಿ ಬಂದರಂತೂ 'ಓಣಿಯೆಲ್ಲ ಜೋಳ' ಎನ್ನುವ ಸಂತೋಷ ಅವರಿಗೆ.

'ಬಿತ್ತುವ ನೆಲಕ್ಕೆ ಮೃಗಶಿರೆಯಲ್ಲಿ ಬಿತ್ತು' ಎನ್ನುವ ರೈತರಿಗೆ ಮೃಗಶಿರೆ ಮಳೆ ಸಂದರ್ಭದಲ್ಲಿ ಮಿಂಚಬಾರದು, ಮಿಂಚಿದರೆ ಸರಿಯಾಗಿ ಮಳೆಯಾಗುವುದಿಲ್ಲ. ಒಂದು ವೇಳೆ ಮೃಗಶಿರಾ ಮಳೆಯಾದರೆ ಮಿಸುಗಾಡದೆ ಹೊಳೆ ತುಂಬಿ ಬಿಡುತ್ತದೆ. ಇನ್ನು 'ಆರಿದ್ರ ಮಳೆಗೆ ಅದ್ದೂರಿ ಬೆಳೆಯಂತೆ'. ಅದಕ್ಕೆ 'ಆರಿದ್ರೀಲಿ ಅದಷ್ಟು ಬಿತ್ತು', ಎನ್ನುವುದು. ಆಗ ಬಿತ್ತಿದರೆ ಅರೆವಾಸಿ ಬೆಳೆಯಾದರೂ ಕೈಗೆ ಸಿಗುತ್ತದೆ. 'ಆರಿದ್ರ ಮಳೆ ಆರದೇ ಇರಬೇಕಂತೆ', ಹಾಗೆ ಬಂದರೆ ಆದಷ್ಟು ಬೆಳೆ ನೋಡೇನು. ಎನ್ನುವ ವಿಶ್ವಾಸ ಮೂಡುತ್ತದೆ. ಆದುದರಿಂದಲೇ 'ಆದ್ರೆ ಆರಿದ್ರ, ಹೋದ್ರೆ ದರಿದ್ರ', ಎನ್ನುವ ಗಾದೆ ಹುಟ್ಟಿಕೊಂಡಿರುವುದು.





'ಗ್ರಾಮೀಣರ ದೃಷ್ಟಿಯಲ್ಲಿ ರಾಗಿ ಜೋಳ ಚಿನ್ನ ಬೆಳ್ಳಿಯಿದ್ದಂತೆ'



'ಬಡವನಿಗೆ ಬಾಳೆ'

ಇನ್ನು ಪುಷ್ಯದ ಮಳೆ ಅವರಿಗೆ 'ಹುಸಿಯಾದ ಮಳೆ'. 'ಅಣ್ಣ ಕೈ ಬಿಟ್ರೂ ತಮ್ಮ ಕೈ ಬಿಡುವುದಿಲ್ಲ' ಎಂಬ ನಂಬಿಕೆ. ಹಾಗೆಯೇ ಆಶ್ಲೇಷ ಎಂದರೆ ಅಸಲೆ ಮಳೆಯೂ ಅಷ್ಟೇ. 'ಅಸಲೆ ಮಳೆ ಬಿದ್ದರೆ ನೆಲವೆಲ್ಲ ಹಸಿರು', 'ಅದು ಜಡಿ ಹಿಡಿದಾಗ ಅಸಲೆ ಮಳೆಗಿಂತ ಬಿಸಿಲೇ ಲೇಸು' ಎನ್ನುವಂತಾಗುತ್ತದೆ. ಮುಖೆ ನಕ್ಷತ್ರದ ಮಳೆಗೆ, 'ಆದರೆ ಮಗೆ, ಹೋದರೆ ಹೊಗೆ' ಎನ್ನುವ ಗಾದೆಯಿದೆ. ಉಬ್ಬೆ ಮಳೆ ಹದವರಿತು ಬರುತ್ತದಂತೆ ಅದಕ್ಕೆ 'ಉಬ್ಬೆ ಮಳೆ ಚಂದ, ತಬ್ಬಲಿ ಮಕ್ಕಳು ಚಂದ' ಎನ್ನುವುದು. 'ಉಬ್ಬೆ ಮಳೆಗೆ ಗುಬ್ಬಿ ತಲೆಯೂ ನೆನೆಯದು' ಎಂಬ ಮಾತೂ ಇದೆ.

ಇನ್ನು ಉತ್ತರೆ ಮಳೆಯ ಬಗೆಗಂತೂ ರೈತರಿಗೆ ಬಹಳ ಗೌರವ. 'ಉತ್ತರೆ ಮಳೆ ಬಂದರೆ ಕುಂತರೂ ಕೂಳು. ಅದು ಬೀಳದಿದ್ದರೆ, ಹೆತ್ತವ್ವ ತೊರೆದ ಹಾಗೆ', ಹಾಗೆಯೇ, ಹಸ್ತದ ಮಳೆಯೂ ಅಷ್ಟೆ, 'ಹಸ್ತದ ಮಳೆ ಬಂದು, ಚಿತ್ತದ ಬಿಸಿಲು ಕಾದು, ಸ್ವಾತಿ ಜಡಿ ಹಿಡಿದರೆ ಮುತ್ತಿನಂಥ ಆರಂಭ' ಎನ್ನುತ್ತಾನೆ ರೈತ. ಹಸ್ತದ ಮಳೆ ರೈತನಿಗೆ ಭಾಷೆ ಕೊಟ್ಟ ಮಳೆಯಂತೆ. 'ಹಸ್ತ ಇಲ್ಲದಿದ್ದರೆ ರೈತ ಹಲ್ಲು ಕಿಸ್ತ' ಎಂಬ ಗಾದೆಯಿದೆ. ಇನ್ನು 'ಚಿತ್ತದ ಮಳೆ ವಿಚಿತ್ರದ ಮಳೆ', 'ಕುರುಡು ಚಿತ್ತ ಮಳೆ, ಎರಿಚಿದತ್ತ ಬೆಳೆ'. ಸ್ವಾತಿ ಆದಮೇಲಂತೂ ರೈತನಿಗೆ ಯಾತರದ್ದೂ ಭಯವಿಲ್ಲ. 'ಸ್ವಾತಿ ಮಳೆ ಬಂದ್ರೆ ...ುತ್ತಿನಂಥ ಜೋಳ', 'ಸ್ವಾತಿ ಮಳೆಯಲ್ಲಿ ಕಾಸಿಗೊಂದು ... ಅದು ಸರಿಯಾಗಿ ನಡೆಸಿದ್ರೆ, ಎತ್ತು ಕೊಟ್ಟು ಎಮ್ಮೆ ...ುತ್ತಾಳಂತೆ ರೈತನ ಹೆಂಡತಿ!

**...ಗಳ ಬಗ್ಗೆ ಅನುಭವ**

...ಂದು ಮಳೆಯೂ ರೈತನಿಗೆ ಒಂದೊಂದು ಅನುಭವ ತಂದುಕೊಟ್ಟಿದೆ. 'ವಿಶಾಖ ಮಳೆ ಪಿಶಾಚಿ ಹಿಡಿದ ಹಾಗಂತೆ', ಅದು ಆಶಿಸಿ ಅಂದ್ರೂ ಬಿಡಿವುದಿಲ್ಲವಂತೆ! ಹಾಗೆಯೇ 'ಅನೂರಾಧ ಮಳೆಗೆ ಆನೆ ಮೈ ನಡುಗುತ್ತದೆ'. ಆದರೆ 'ಅನೂರಾಧ ಬಿದ್ದು ಮನೋರೋಗ ಹೋಗುವುದೂ' ಉಂಟು. ಅಂದರೆ ಬೆಳೆ ಖಾತ್ರಿಯಾಗಿ ರೈತನ ಚಿಂತೆ

*ನಮ್ಮ ರೈತರು ತಮ್ಮ ಬದುಕಿಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗೆಗೆ ಗಾದೆ ಮಾತು ಜೋಡಿಸುತ್ತಾರೆ. ಗಾದೆ ಅವರ ಮಾತುಕತೆಯ ಅವಿಭಾಜ್ಯ ಅಂಗ. ಸಪ್ಪೆಯ. ಊಟಕ್ಕೆ ಉಪ್ಪಿನ ಕಾಯಿಯಂತೆ, ಈ ಗಾದೆಗಳು ಅಷ್ಟು ರುಚಿ, ಅಷ್ಟು ಹಿತಕರ.*



'ಬಲ್ಲಿದವನಿಗೆ ಕಬ್ಬು"







'ಕರಾವು ಇದ್ದ ಮನೆಗೆ ಬರವೇ ಇಲ್ಲವಂತೆ'

ದೂರವಾಗುತ್ತದೆ. 'ಕಾಲವಲ್ಲದ ಕಾಲದಲ್ಲಿ ಬರುವ ಮೂಲ ನಕ್ಷತ್ರದ ಮಳೆ' ಬಗ್ಗೆ ರೈತನಿಗೆ ನಂಬಿಕೆಯಿಲ್ಲ. ಪೂರ್ವಾಷಾಡ, ಉತ್ತರಾಷಾಡ ಮಳೆಗಳಂತೂ ಬೇಡವೇ ಬೇಡ, ಎನ್ನುತ್ತಾನೆ. ಬೇಕಾದರೆ ರೇವತಿ ಬರಲಿ!

ಹೀಗೆ ಮಳೆಗಳ ಬಗ್ಗೆ ತಲೆ ಮಾರುಗಳ ಅನುಭವ ಪಡೆದಿರುವ ನಮ್ಮ ರೈತ 'ಆಷಾಡದ ಗಾಳಿ ಬೀಸಿದರೆ ಆರು ತಿಂಗಳ ಗ್ರಾಸ ಮೂರು ತಿಂಗಳಿಗೆ' ಎನ್ನುತ್ತಾನೆ. 'ಉಗಾದಿಗೆ ಉಗುಳು ನೀರು, ಕಾಮನ ಹುಣ್ಣಿಮೆಗೆ ಕುಲುಕು ನೀರಾದರೂ ಬರಬೇಕು' ಎಂದು ನಿರೀಕ್ಷಿಸುತ್ತಾನೆ. ಒಮ್ಮೊಮ್ಮೆ ಅವರಿಗೆ 'ಚಳಿಗಾಲಕ್ಕಿಂತ ಮಳೆಗಾಲ ವಾಸಿ' ಎನ್ನಿಸುತ್ತದೆ. 'ಬೇಸಿಗೆ ಕಾಲದಲ್ಲಿ ತಂಗಾಳಿ ಬೀಸಿದರೆ ಮಂಗನಿಗೂ ಉಲ್ಲಾಸ' ಎನ್ನುತ್ತಾನೆ. ಹೀಗೆ ವಿವಿಧ ಋತುಮಾನದ, ವಿವಿಧ ಹಂಗಾಮುಗಳ ಬಗೆಗೆ ಅವರದೇ ಆದ ಅನುಭವದ ಗಾದೆ ಮಾತುಗಳಿವೆ.

## ಬಿತ್ತನೆ

ಇನ್ನು ಅವರ ಉಳುಮೆ ಬಗೆಗಿರುವ ಗಾದೆಗಳಿಗೆ ಕೆಲವು ಉದಾಹರಣೆಗಳು 'ಹೆತ್ತಲ್ಲದೆ ತಾಯಲ್ಲ, ಉತ್ತಲ್ಲದೆ ಮಣ್ಣಲ್ಲ', 'ಅಂಗೈನಂಗೆ ಹೊಲ ಮಾಡಿದರೆ ಮುಂಗೈ ತುಂಬ ತುಪ್ಪ', 'ಉಳುವಾಗ ಊರಿದರೆ ಕೊಯ್ಯುವಾಗ ಹಗುರ,' ಹಾಗೆಯೇ 'ಬೆಳೆ ಕೊಡುವ ಭೂಮಿಗೆ ಗೊಬ್ಬರ ಕೊಡಬೇಕು'. ಗೊಬ್ಬರದ ತ್ರಾಣದ ಬಗೆಗೆ ಎಷ್ಟು ಹೇಳಿದರೂ ರೈತನಿಗೆ ತೃಪ್ತಿಯಿಲ್ಲ. 'ಅನ್ನ ಹಾಕಿದ ಮನೆ ಕೆಡಲ್ಲ, ಗೊಬ್ಬರ ಹಾಕಿದ ಹೊಲ ಕೆಡಲ್ಲ' ಎನ್ನುವ ರೈತ, 'ಎಲೆ ಗೊಬ್ಬರಕ್ಕೆ ಬೆಲೆ ಕಟ್ಟಬಾರದು' ಎನ್ನುತ್ತಾನೆ. ಮಣ್ಣು ಎಷ್ಟು ಫಲವತ್ತಿದ್ದರೂ, ಗೊಬ್ಬರ ಎಷ್ಟೇ ಕೊಟ್ಟರೂ, ಬಿತ್ತನೆಯೇ ಸರಿಯಾಗಿಲ್ಲದಿದ್ದರೆ ನಿರೀಕ್ಷಿತ ಫಸಲು ಪಡೆಯಲಾಗುವುದಿಲ್ಲ. ಅದಕ್ಕೆ ಬಿತ್ತುವ ಸಮಯದಲ್ಲಿ ಬೀಜ ಹುಡುಕದೆ ಕಾಲಕ್ಕೆ ಸರಿಯಾಗಿ ಉತ್ತಮ ಬೀಜವನ್ನು ಸಿದ್ಧಮಾಡಿಟ್ಟುಕೊಂಡು ಬಿತ್ತಬೇಕು. 'ಹಿಡಿ ಬಿತ್ತಿದರೂ ಹದವಾಗಿ ಬಿತ್ತಬೇಕು', ಆಗ 'ಕಿರಿದಾಗಿ ಬಿತ್ತಿದರೂ ಹಿರಿದಾದ ಬೆಳೆ' ಪಡೆಯುವ ಭರವಸೆ ಇರುತ್ತದೆ.

ಹರಗುವ ಕೆಲಸವನ್ನೂ ಅಷ್ಟೇ ಹದವರಿತು ಮಾಡಬೇಕು. 'ಹದನೋಡಿ ಹರಗು; ಬೆದೆ ನೋಡಿ ಬಿತ್ತು' ಎನ್ನುವ ಗಾದೆ ಮಾತು ಇದ್ದೇ ಇದೆ. 'ಹಸಿ ನೋಡಿ ಹರಗು, ತಳಿ ನೋಡಿ ಬಿತ್ತು' ಎನ್ನುವ ಇನ್ನೊಂದು ಮಾತೂ ಇದೆ. ಹರತೆ ನಿಲ್ಲೂತ್ತ ಅಂದ್ರೆ, ಹಡಗು ಮುಳಗಿದ ಹಾಗೆ, 'ಹರಗಿ ಬಿತ್ತಿದ ಅಂದ್ರೆ ಮೊಳದುದ್ದ ತೆನೆ!'

**ಕಳೆ ತೆಗೆಯುವುದು**

ಬಿತ್ತಿದರಷ್ಟೇ ಸಾಲದು; ಕಾಲ ಕಾಲಕ್ಕೆ ಕಳೆ ತೆಗೆಯುವುದೂ ಅಷ್ಟೇ ಮುಖ್ಯ. 'ಕಪಿ ಹೆಚ್ಚಿದ ತೋಟ ಹಾಳು, ಕಳೆ ಹೆಚ್ಚಿದ ಹೊಲ ಹಾಳು', 'ಕರಿಕೆ ಹತ್ತಿದ ಹೊಲ ಹುರುಕು ಹತ್ತಿದ ಹಾಗೆ', 'ಕಳೆ ಇದ್ದರೆ ಬೆಳೆ ಬರುವುದು ಸಾಧ್ಯವಿಲ್ಲ', ಈ ಕಳೆ ನಾಶ ಮಾಡಲಿಕ್ಕೆ 'ಹುರುಳಿ ಬೆಳೆದು ಕಳೆ ನಿಲ್ಲಿಸು' ಎಂಬ ಅವರದೇ ಆದ ಅನುಭವದ ವಿಧಾನವೂ ಉಂಟು.

**ಬೆಳೆಗೆ ರಕ್ಷಣೆ**

ಇನ್ನು ಬೆಳೆದ ಬೆಳೆಗೆ ರಕ್ಷಣೆ ಬೇಕು. ಇಲ್ಲವಾದರೆ 'ಕೊಟ್ಟ ಸಾಲ ಕೇಳದೇ ಹೋಯ್ತು, ನೆಟ್ಟ ಹೊಲ ನೋಡದೇ ಹೋಯ್ತು' ಎಂಬಂತಾಗುತ್ತದೆ. 'ಎದ್ದ ಕೂಡಲೇ ಹೆಂಗಸರು ಒಲೆ ನೋಡಬೇಕಂತೆ, ಗಂಡಸು ಹೊಲ ನೋಡಬೇಕಂತೆ' ಸರಿಯಾದ ಬೇಲಿ ಇದ್ರೆ ಹೊಲದ ತುಂಬ ಬೆಳೆಯಾದರೂ, 'ಕಾಯಲಿಕ್ಕೆ ಮನೆಗೊಬ್ಬ ಮುದುಕಿ ಹೊಲಕ್ಕೊಬ್ಬ ಮುದುಕ' ಇರಲೇಬೇಕಂತೆ!

**ಕೃಷಿ ಗಾದೆಗಳು ಅಮೂಲ್ಯ ಶಬ್ದ ಭಂಡಾರಗಳಷ್ಟೇ ಅಲ್ಲ, ಲೋಕಾನುಭವದ ದೊಡ್ಡ ಕಣಜಗಳು. ಒಂದೊಂದು ಗಾದೆಯನ್ನೂ ಬಿಡಿಸಿ ನೋಡಿದರೆ ವಿಸ್ಮಯಕಾರಿ ಅನುಭವದ ಬೆಳಕು ನಮಗೆ ಗೋಚರವಾಗುತ್ತದೆ. ಕೃಷಿ ಸಂಶೋಧನೆ ನಡೆಸುವವರು ಕೃಷಿ ಗಾದೆಗಳ ಬಗೆಗೂ ಅಧ್ಯಯನ ನಡೆಸಿದರೆ ಕೃಷಿ ಪ್ರಗತಿಗೆ ನೆರವಾಗುವ ಎಷ್ಟೋ ಬೆರಗುಗೊಳಿಸುವ ಅಂಶಗಳು ತಿಳಿಯಬಹುದು.**

ರೈತರ ಬೇಸಾಯ ಖುಷ್ಕಿ ಬೆಳೆಗೆ ಒಂದು ರೀತಿಯಾದರೆ, ತರಿ ಬೆಳೆಗೆ ಮತ್ತೊಂದು ರೀತಿ. ಅವನ ಮಾತಿನಲ್ಲಿ ಕಪ್ಪು ಮಣ್ಣು ಕಾಳಿನ ಕಣಜ. 'ಎರೆ ಹೊಲ ಬೇಕು, ಕರಿ ಹೆಂಡತಿ ಬೇಕು'. 'ಎರೆನಾಡೋ ದೊರೆನಾಡೋ' ಎಂದು ಹೇಳುವ ರೈತನ ಹಳ್ಳದ ಹೊಲ ಹುಲುಸಾಗಿ ಬೆಳೆಯುತ್ತದೆ. 'ಒಡ್ಡು ಇಲ್ಲದ ಹೊಲ ಗೊಡ್ಡೆಮ್ಮೆ ಇದ್ದಂತೆ'.

### ಖುಷ್ಕಿ ಬೆಳೆ

ಖುಷ್ಕಿ ಬೆಳೆಗಳಲ್ಲಿ ರಾಗಿ, ಜೋಳ ಪ್ರಧಾನವಾದವು. ರೈತನ ದೃಷ್ಟಿಯಲ್ಲಿ ಅವು 'ಚಿನ್ನ ಬೆಳ್ಳಿ'ಯಿದ್ದಂತೆ. ಇನ್ನು ತರಿ ಬೇಸಾಯದ ಬಗ್ಗೆ ಹೇಳುತ್ತಾ, 'ಆಡಿ ಕೊಟ್ಟ ಜನ ಇಲ್ಲ, ಹೂಡಿ ಕೆಟ್ಟ ಗದ್ದೆ ಇಲ್ಲ' ಎನ್ನುತ್ತಾನೆ. 'ಅತ್ತೆ ಇಲ್ಲದ ಅಳಿಯ, ಅಕ್ಕಿ ಬೆಳೆಯದ ಒಕ್ಕಲಿಗ' ಇಬ್ಬರೂ ಒಂದೇ. 'ಕಬ್ಬಿನ ಗದ್ದೆಯಲ್ಲಿ ಗಿಣ್ಣೆರಬೇಕು, ಫರಂಗಿ ಮರದಲ್ಲಿ ಹಣ್ಣೆರಬೇಕು'. 'ನೆಲಕ್ಕೆ ತಕ್ಕ ನೀರು ಹಾಯಿಸಿ ಫಲಕ್ಕೆ ತಕ್ಕ ಬೀಜ ಹಾಕಬೇಕು'. 'ಬಿತ್ತಿ ಬೆಳೆಯುವುದಕ್ಕಿಂತ ಕಿತ್ತು ನೆಡುವುದು ಲೇಸು' ಎನ್ನುವ ಮಾತು ನಾಟಿ ವಿಧಾನದ ಲಾಭ ತಿಳಿಸುತ್ತದೆ. 'ಹೊಡೆ ಬರುವಾಗ ಮಡುಕಟ್ಟು' ಎಂದು ಹೇಳುವ ರೈತ 'ಗದ್ದೆ ಇದ್ದರೆ ಬತ್ತ, ಸುದ್ದಿ ನಿಂತರೆ ಸತ್ತ' ಎನ್ನುತ್ತಾನೆ.

ಹೀಗೆ ರೈತ ತನ್ನ ಕಾಯಕವನ್ನು ಕ್ರಮವಾಗಿ ನಡೆಸಿಕೊಂಡು ಬಂದರೆ ನೆರೆಯವರಿಗೆಲ್ಲ ಅವನೇ ದೊರೆಯಾಗುತ್ತಾನಂತೆ. ಅವನು ತುಂಬ ಎಚ್ಚರದಿಂದ ತನ್ನ ಕುಲ ಕಸುಬು ಮಾಡುತ್ತಾನೆ. 'ಹನಿ ಕೂಡಿದರೆ ಹಳ್ಳ, ತೆನೆ ಕೂಡಿದರೆ ಕಣಜ' ಎಂಬುದನ್ನು ಅವನು ಬಲ್ಲ. 'ಬಗ್ಗಿ ದುಡಿದರೆ ಮಾತ್ರ ಸುಗ್ಗಿಯಲ್ಲಿ ಸುಮ್ಮಾನ' ಎಂಬುದು ಅನುಭವಕ್ಕೆ ಬಂದಿದೆ. ಆದರೂ 'ಸುಗ್ಗಿಯಲ್ಲಿ ಸೊಕ್ಕದ, ಮುಗ್ಗಟ್ಟಿನಲ್ಲಿ ಕುಗ್ಗದ' ಸಜ್ಜನಿಕೆ ಆತನದು!

ಅನೇಕ ವೇಳೆ ಅತಿವೃಷ್ಟಿ ಅನಾವೃಷ್ಟಿಗಳಿಂದ ರೈತ ತನ್ನ ಶ್ರಮಕ್ಕೆ ತಕ್ಕ ಫಲ ಪಡೆಯಲು ಸಾಧ್ಯವಾಗದಿರುವುದುಂಟು. ಅಂತಹ ಸಂದರ್ಭದಲ್ಲಿ 'ಎಷ್ಟು ಕರೆದರೂ ಕತ್ತಲೆ, ಎಷ್ಟು ಬೆಳೆದರೂ ಬೆತ್ತಲೆ' ಎಂದು ಮರುಗುವುದುಂಟು. ಎಷ್ಟೋ ಸಂದರ್ಭಗಳಲ್ಲಿ 'ರಸ ಬೆಳೆದು ಕಸ ತಿನ್ನುವ' ಕಹಿ ಅನುಭವ ಆಗುವುದೂ ಉಂಟು.

### ತೋಟದ ಬೆಳೆ

ಇನ್ನು ತೋಟದ ಬೆಳೆ ಬಗೆಗೆ ಇರುವ ಗಾದೆಗಳನ್ನು ಕೇಳಿ. 'ಬಾಳೆ ಬಗೆದು ಹಾಕಿ, ತೆಂಗು ತೇಲಿಸಿ ಹಾಕ'ಬೇಕಂತೆ. 'ತೋಟ ಮಾಡದವನಿಗೆ ಊಟವೆ ಇಲ್ಲ'ವಂತೆ. 'ಬಡವನಿಗೆ ಬಾಳೆ, ಬಲ್ಲಿದನಿಗೆ ಕಬ್ಬು' ಎನ್ನುವ ಮಾತು ಕಬ್ಬಿನ ಬೆಳೆಗೆ ಬೇಕಾದ ಬಂಡವಾಳದ ಸ್ಥಿತಿಯನ್ನು ಸೂಚಿಸುತ್ತದೆ.



**'ತೋಟ ಮಾಡದವನಿಗೆ ಊಟವೇ ಇಲ್ಲವಂತೆ'**

ಮೊಸರಿಲ್ಲದ ಊಟದಂತೆ, ಕೆಸರಿಲ್ಲದ ಗದ್ದೆಯಂತೆ ಗಾದೆಯಿಲ್ಲದ ಮಾತುಕತೆಗಳೆಂದರೆ ರಸಹೀನವೆನಿಸುತ್ತವೆ. ನಮ್ಮ ರೈತರು ರಸಜೀವಿಗಳು. ಜೀವನದಲ್ಲಿ ಎಷ್ಟೇ ಕಷ್ಟವಿದ್ದರೂ ತಮ್ಮ ರಸಜೇನಿನ ಮಾತುಗಳಿಂದ, ಬೆವರು ಹರಿಸುವ ದುಡಿಮೆಯಿಂದ ಆ ಕಷ್ಟವನ್ನು ಮರೆತು ಬಿಡುತ್ತಾರೆ.





ತೋಟಗಾರಿಕೆ ಬಗ್ಗೆ ರೈತರಿಗೆ ಎಷ್ಟು ಖಾತರಿ ಇದೆಯೆಂದರೆ, 'ಮುತ್ತು ಮಾರಿ ಸಾಲಿಗನಾದರೂ, ಮೂಲಂಗಿ ಮಾರಿ ಶ್ರೀಮಂತನಾಗಬಹುದು.'



**'ಅಂಗೈನಂಗೆ ಹೊಲ ಮಾಡಿದರೆ ಮುಂಗೈ ತುಂಬ ತುಪ್ಪ"**

### ದನಕರುಗಳು

ರೈತನ ಹೊಲ ಗದ್ದೆಗಳ ನಿರ್ವಹಣೆಗೆ ನೆರವೆಂದರೆ ದನ-ಕರುಗಳು. ಅದಕ್ಕೆ ತುರು-ಕರು ಇಲ್ಲದ ಊರು ನರಕ ಎಂದಿದ್ದಾನೆ ಸರ್ವಜ್ಞ. ನಮ್ಮ ಹಳ್ಳಿಯ ಜನರ ದೃಷ್ಟಿಯಲ್ಲಿ ದನ ಕಾಯುವವನು ಧರ್ಮರಾಯ. ಆ ದನಕರುಗಳ ಆಯ್ಕೆಯ ಬಗೆಗೂ ಅವರಿಗೆ ಬಹಳ ಜಾಗೃತಿ. 'ತಳಿ ನೋಡಿ ದನ ತತ್ತ, ಸುಳಿ ನೋಡಿ ಹೆಣ್ಣು ತತ್ತ' ಎನ್ನುವ ಎಚ್ಚರ. ಅವರಿಗೆ ಧನವಿಲ್ಲದಿದ್ದರೂ ದನವಿರಬೇಕು.

### ರೈತನ ದೈವ

ಇನ್ನು ನಮ್ಮ ರೈತನ ದೈವ - ಉತ್ತಿಬಿತ್ತಿಕೊಡುವ ಎತ್ತುಗಳು. ಅವನು ಎತ್ತಿಗೆ 'ಬಸವಣ್ಣ' ಎನ್ನುತ್ತಾನೆ. ಅವನ ಬಸವಣ್ಣ ಶಿವನಿಗೂ ಹಿರಿಯನಂತೆ. ರೈತನ ಬದುಕಿನಲ್ಲಿ 'ಎತ್ತಿಲ್ಲದವನಿಗೆ ಎದೆಯಿಲ್ಲ'. 'ಮೂಗಿಗೆ ನತ್ತು ಚೆಂದವಾದರೆ, ಕೊಟ್ಟಿಗೆಗೆ ಎತ್ತು ಚೆಂದ'. 'ಎತ್ತು ಬಾಡಿಗೆಯದಾದರೂ ಅದನ್ನು ಬಡಿದು ಹೂಡಬಾರದು' ಎಂಬ ಕರುಣೆ ನಮ್ಮ ರೈತನದು.

### ಹೈನುಗಾರಿಕೆ

ಹಾಗೆಯೇ, ಹಾಲು ಕೊಡುವ ಸಗಣಿ ಕೊಡುವ ಎಮ್ಮೆ ಹಸುಗಳೂ ರೈತನ ಬೆಲೆ ಬಾಳುವ ಆಸ್ತಿ. ಮನೆಯಲ್ಲಿ ಎಮ್ಮೆ ಕರೆಯುತ್ತಿದ್ದರೆ ಪುಣ್ಯವೇ ಕರೆದಂತೆ! ಕರಾವು ಅಂದರೆ ಹಾಲು ಹೈನು. 'ಕರಾವು ಇದ್ದ ಮನೆಗೆ ಬರವೇ ಇಲ್ಲವಂತೆ', 'ಹೈನು ಉಣ್ಣಬೇಕಾದರೆ ಎರಡು ಎಮ್ಮೆ ಕಟ್ಟಬೇಕಂತೆ, ಹದಗೆಡಬೇಕಾದರೆ ಇಬ್ಬರು ಹೆಂಡಿರನ್ನು ಮಾಡಿಕೊಳ್ಳಬೇಕಂತೆ'. 'ಏನೇ ಇದ್ದರೂ ಆಕಳಿದ್ದವನಿಗೆ ವ್ಯಾಕುಲವಿಲ್ಲ' ಆದರೆ ಹಂಡೆ ತುಂಬ ಹಾಲು ಕರೆಯಬೇಕೆಂದರೆ ಹಸುವಿನ ಹೊಟ್ಟೆ ತುಂಬ ಹುಲ್ಲು ಕೊಡಬೇಕು.

ಹೀಗೆ ನಮ್ಮ ರೈತರು ತಮ್ಮ ಬದುಕಿಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗೆಗೂ ಗಾದೆ ಮಾತು ಜೋಡಿಸುತ್ತಾರೆ. ಗಾದೆ ಅವರ ಮಾತುಕತೆಯ ಅವಿಭಾಜ್ಯ ಅಂಗ. ಸಪ್ಪೆಯ ಊಟಕ್ಕೆ ಉಪ್ಪಿನಕಾಯಿಯಂತೆ ಈ ಗಾದೆಗಳು. ಅಷ್ಟು ರುಚಿ, ಅಷ್ಟು ಹಿತಕರ.

### ಬದುಕಿನ ಬಗ್ಗೆ ಎಚ್ಚರ

ನಮ್ಮ ರೈತರು ದೂರದ ಊರು ನೋಡಿದವರಲ್ಲ. ಅತ್ತ ಗುಂತಕಲ್ಲು ಕಂಡಿಲ್ಲ, ಇತ್ತ ಕೊಪ್ಪಳ ಕಂಡಿಲ್ಲ. ಆದರೂ ಹತ್ತಿರದ ಸುತ್ತಮುತ್ತನ್ನೇ ಅರ್ಥಮಾಡಿಕೊಂಡು ತಮ್ಮ ನಿತ್ಯ ಜೀವನದ ಅನುಭವಗಳನ್ನೇ ಆಧರಿಸಿ ಇಂತಹ ಸ್ವಾರಸ್ಯದ ಗಾದೆ ಮಾತುಗಳನ್ನು ಆಡುತ್ತಾರೆ. ರಟ್ಟೆ ಗಟ್ಟಿ ಮುಟ್ಟಾಗಿದ್ದು ಕಷ್ಟ ಪಟ್ಟು ದುಡಿಯುತ್ತಾರೆ. 'ಉಂಡಾಗ ಒಂದು ಹಸಿದಾಗ ಒಂದು ಜ್ಞಾನ'ದವರಲ್ಲ. 'ಹುಡುಗ ಬುದ್ಧಿಯಿಂದ ಎಡವಿ ಬೀಳುವವರಲ್ಲ' ಬದುಕಿನಲ್ಲಿ ತುಂಬ ಎಚ್ಚರ. 'ಲಂಗೋಟಿ ಯಾಗಲಿ, ಲುಂಗಿಯಾಗಲಿ ಎರಡೂ ಇರುವುದು ಮಾನ ಮುಚ್ಚಲಿಕ್ಕಾಗಿ' ಎಂಬುದು ಅವರಿಗೆ ಗೊತ್ತು. 'ಹಳೆ ಬಟ್ಟೆಯಾದರೂ ಕೊಳೆ ಇಲ್ಲದಂತಿರಬೇಕು' ಎನ್ನುವುದು ಅವರ ಅನುಭವದ ಮಾತು.

### ರಸಜೀವಿಗಳು

ಮೊಸರಿಲ್ಲದ ಊಟದಂತೆ, ಕೆಸರಿಲ್ಲದ ಗದ್ದೆಯಂತೆ ಗಾದೆಯಿಲ್ಲದ ಮಾತುಕತೆಗಳೆಂದರೆ ರಸಹೀನವೆನಿಸುತ್ತವೆ. ನಮ್ಮ ರೈತರು ರಸಜೀವಿಗಳು. ಜೀವನದಲ್ಲಿ ಎಷ್ಟೇ ಕಷ್ಟವಿದ್ದರೂ ತಮ್ಮ ರಸಜೇನಿನ ಮಾತುಗಳಿಂದ, ಬೆವರು ಹರಿಸುವ ದುಡಿಮೆಯಿಂದ ಆ ಕಷ್ಟವನ್ನು ಮರೆತು ಬಿಡುತ್ತಾರೆ.

ಅವರ ಬದುಕು 'ತೂಗಾಡದ ತೂಕ' ಅನುಭವದ ರಸಪಾಕ!




ಸಿದ್ಧಗಂಗಾ ವಿದ್ಯಾಸಂಸ್ಥೆಯ ಆಶ್ರಯದಲ್ಲಿ ಇತ್ತೀಚೆಗೆ ನಡೆದ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾನಿಲಯದ ನೂತನ ಉಪಕುಲಪತಿ ಡಾ. ಎಸ್. ರಾಜಶೇಖರಯ್ಯ ಅವರ ಅಭಿನಂದನಾ ಸಮಾರಂಭದಲ್ಲಿ ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಆಶೀರ್ವಚನ ನೀಡಿದರು. ಈ ಸಂದರ್ಭದಲ್ಲಿ ಅಖಿಲ ಭಾರತ ತಾಂತ್ರಿಕ ಶಿಕ್ಷಣ ಮಂಡಳಿಯ ಅಧ್ಯಕ್ಷರಾದ ಪ್ರೊ. ಜಿ. ಪರಮೇಶ್ವರಪ್ಪ, ಶ್ರೀಮತಿ ಎಸ್. ರಾಜಶೇಖರಯ್ಯ, ಡಾ. ಎ. ಎಂ. ಪಠಾಣ್, ಸಿದ್ಧಗಂಗಾ ತಾಂತ್ರಿಕ ವಿದ್ಯಾಲಯದ ಪ್ರಾಂಶುಪಾಲರಾದ ಡಾ. ಎಂ. ಎನ್. ಚನ್ನಬಸಪ್ಪ ಅವರು ಉಪಸ್ಥಿತರಿದ್ದರು.



ವಿವಿಧ ಸಮಾರಂಭದಲ್ಲಿ ಕಿಕ್ಕಿರಿದ ಪ್ರೇಕ್ಷಕರು







ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ನೌಕರರ ಸಂಘದವರು ಏರ್ಪಡಿಸಿದ್ದ ಶ್ರೀ ಬಸವ ಜಯಂತಿ ಕಾರ್ಯಕ್ರಮದಲ್ಲಿ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಆಶೀರ್ವಚನ ನೀಡುತ್ತಿರುವುದು. ಈ ಸಂದರ್ಭದಲ್ಲಿ ಕಿರಿಯ ಸ್ವಾಮೀಜಿ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಪ್ರಾಚಾರ್ಯರಾದ ಡಾ. ಎಂ. ಎನ್. ಚನ್ನಬಸಪ್ಪ ಮೊದಲಾದವರು ಉಪಸ್ಥಿತರಿದ್ದರು.

ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ನಡೆದ ಟೆಕ್ನಿಷಿಯಂ-98 ಸಮಾರಂಭದಲ್ಲಿ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಿರುವುದು. ಚಿತ್ರದಲ್ಲಿ ಶ್ರೀ ಅನಂತ ಆರ್.ಕೊಪ್ಪರ್, ಡಾ. ಎಸ್. ರಾಮೇಗೌಡ, ಡಾ. ಎಂ. ಎನ್. ಚನ್ನಬಸಪ್ಪ ಹಾಗೂ ಪ್ರೊ. ಬಸವರಾಜಯ್ಯ ಅವರನ್ನು ಕಾಣಬಹುದು.



ಸಿದ್ಧಗಂಗಾ ಅಂಧ ಮಕ್ಕಳ ಶಾಲೆಗೆ ಬ್ರೈಲ್ ಲಿಪಿ ಪುಸ್ತಕಗಳು ಹಾಗೂ ಇತರೆ ಉಪಕರಣಗಳ ಕೊಡುಗೆಯನ್ನು ಮೈಸೂರು ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಎಸ್.ಆರ್. ಅಯ್ಯರ್ ಅವರು ಪರಮಪೂಜ್ಯ ಶ್ರೀ ಶ್ರೀಗಳವರ ಸಮ್ಮುಖದಲ್ಲಿ ಶಾಲೆಯ ಮುಖ್ಯ ಶಿಕ್ಷಕರಾದ ಶ್ರೀ ಬಿ. ಎಲ್. ಚಂದ್ರಶೇಖರಯ್ಯ ಅವರಿಗೆ ನೀಡುತ್ತಿರುವುದು. ಈ ಸಂದರ್ಭದಲ್ಲಿ ಮೈಸೂರು ಬ್ಯಾಂಕಿನ ಶಾಖಾ ವ್ಯವಸ್ಥಾಪಕರಾದ ಶ್ರೀ ಸುಧಾಕರ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಶ್ರೀ ಎಸ್. ಆರ್. ಅಯ್ಯರ್ ಅವರಿಗೆ ಶ್ರೀ ಶ್ರೀಗಳವರಿಂದ ಆಶೀರ್ವಾದ

ಸಮಾರಂಭದಲ್ಲಿ ಅಂಧ ಮಕ್ಕಳು





# 'ಪಂಡಿತ ರತ್ನ' - ಶ್ರೀ ಚನ್ನಪ್ಪ ಎರೇಸೀಮೆ

ಪಂಡಿತ ಚನ್ನಪ್ಪ ಎರೇಸೀಮೆ ಅವರಲ್ಲಿರುವ ಅಗಾಧ ವಿದ್ವತ್ತು, ಪ್ರವಚನ ಕೌಶಲ್ಯ, ಉತ್ತರ ಕರ್ನಾಟಕದ ಲಯಬದ್ಧ ಮಾತಿನ ಶೈಲಿ, ಅಕೃತ್ರಿಮ ಸ್ನೇಹ, ಶ್ರೀಮಠದ ಬಗೆಗಿರುವ ನಿಷ್ಠೆ, ಶ್ರೀಶ್ರೀಗಳಲ್ಲಿಟ್ಟಿರುವ ಭಕ್ತಿ ಶ್ರದ್ಧೆ, ಹಳೆಯ ವಿದ್ಯಾರ್ಥಿಗಳೊಡನೆ ಹೊಂದಿರುವ ಆತ್ಮೀಯತೆ, ಉದಯೋನ್ಮುಖ ಲೇಖಕರನ್ನು ಬೆನ್ನು ತಟ್ಟಿ ಮುನ್ನಡೆಸುವ ದೊಡ್ಡಗುಣಗಳು, ಗುರು ಲಿಂಗ ಜಂಗಮ ಪ್ರೇಮ, ಶರಣ ಸಂಸ್ಕೃತಿಗಾಗಿ ಮಾಡಿದ ಸೇವೆಯನ್ನು ಗಮನಿಸಿ. ಶ್ರೀ ಮಠದ ಭಕ್ತಾದಿಗಳು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು ಮತ್ತು ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಸೇವಾ ಬಂಧುಗಳು ಪರಮ ಪೂಜ್ಯ ಶ್ರೀ ಶ್ರೀಗಳವರ 91ನೇ ಜನ್ಮದಿನಾಚರಣೆ "ಗುರುವಂದನ" ಸಮಾರಂಭದಲ್ಲಿ ಶ್ರೀಯುತರನ್ನು "ಪಂಡಿತರತ್ನ" ಎಂದು ಬಿರುದು ನೀಡಿ ಗೌರವಿಸಿದರು. ಅವರ ಪರಿಚಯ ಲೇಖನ ಇಲ್ಲಿದೆ.

'ಹರವಿ' ಗ್ರಾಮದ ಸಾಣೆ ಹಿಡಿದ ರತ್ನ ಪಂಡಿತ ಚನ್ನಪ್ಪ ಎರೇಸೀಮೆಯವರು. 'ಎರೇಸೀಮೆ' ಎಂದೇ ಖ್ಯಾತರಾದವರು. ಎರೆಯ ನಾಡಿನ ಶ್ರೇಷ್ಠ ಸತ್ವವನ್ನೆಲ್ಲಾ ಮೈಗೂಡಿಸಿಕೊಂಡು ಸಾಹಿತ್ಯ ಕ್ಷೇತ್ರದಲ್ಲಿ ಅರಳಿದ ಚನ್ನಪ್ಪನವರ ಜನನ 3-9-1919ರಲ್ಲಿ ಧಾರವಾಡ ಜಿಲ್ಲೆ, ಹಾನಗಲ್ಲು ತಾಲ್ಲೂಕು, ಹರವಿ ಪುಣ್ಯ ಗ್ರಾಮದಲ್ಲಿ. ತಂದೆ ಶ್ರೀ ಮುದುಕಪ್ಪ, ತಾಯಿ ಶ್ರೀಮತಿ ಸಂಗಮ್ಮ.

**ವ್ಯಾಸಂಗ ಹಾಗೂ ವೃತ್ತಿ ವಿವರಗಳು** : 1934-35 ಬೊಂಬಾಯಿ ಸರ್ಕಾರದ ಪರೀಕ್ಷೆಯಲ್ಲಿ ತೇರ್ಗಡೆ. 1943-46 ವಿ.ಟಿ.ಸಿ.ಯಲ್ಲಿ ಪ್ರಥಮ ದರ್ಜೆ ದ್ವಿತೀಯ ರ್‍ಯಾಂಕು ಗಳಿಕೆ. 1938ರಿಂದ ಶಿಕ್ಷಕ ವೃತ್ತಿ ಜೀವನದಾರಂಭ. ಧಾರವಾಡ ಜಿಲ್ಲೆ, ಹಾನಗಲ್ಲು ತಾಲ್ಲೂಕು ಹಿರೇಕಾಶಿ ಗ್ರಾಮದಲ್ಲಿ. 1943ರಿಂದ ಕನ್ನಡ ಪಂಡಿತ ಪರೀಕ್ಷೆ ತರಬೇತಿ. ಪ್ರಾಥಮಿಕ, ಮಾಧ್ಯಮಿಕ ಶಾಲಾ ಶಿಕ್ಷಕ ವೃತ್ತಿಯಲ್ಲಿ ಮುನ್ನಡೆ. 1952ರಿಂದ ಪ್ರೌಢಶಾಲೆ, ಜೂನಿಯರ್ ಕಾಲೇಜುಗಳಲ್ಲಿ ಅಧ್ಯಾಪನ. ವೃತ್ತಿ ಜೀವನದ ಉತ್ತಮ ಅವಧಿ. ವ್ಯಕ್ತಿ ವಿಕಾಸಕ್ಕೆ ತೆರೆದುಕೊಂಡ ಮಹತ್ವದ ಕಾಲ. ಶ್ರೇಯಸ್ಸು, ಯಶಸ್ಸುಗಳಿಗೆ ನಿಚ್ಚಣಿಕೆಯಾದ ದಿನಮಾನಗಳು. ವಿದ್ಯಾರ್ಥಿಗಳ ಹೃದಯ ಮಂದಿರದಲ್ಲಿ ಪ್ರತಿಷ್ಠಾಪಿತವಾದ ಸುವರ್ಣಾವಧಿ. ಪ್ರೀತಿಯ ಮೇಸ್ತ್ರು, ಜ್ಞಾನದ ಪಂಜು, ಪ್ರವಚನ ಪ್ರವೀಣ, ಕೀರ್ತನಾಚಾರ್ಯ, ಪಾಂಡಿತ್ಯದ ರತ್ನಗಣಿ, ಸ್ನೇಹ ವಿಶ್ವಾಸಗಳ ವಾಚಾಳಿ ಮಿತ್ರ ಎಂದೆಲ್ಲ ಜನಪ್ರಿಯರಾದ ಶಿಖರಗಾಮಿಯಾದ ಜೀವನಾವಧಿ. 1966ರಿಂದ ಉಪಾಧ್ಯಾಯ ಟ್ರೈನಿಂಗ್ ಸ್ಕೂಲಿನಲ್ಲಿ ಅರೆಕಾಲಿಕ ಪಾಧ್ಯಾಪಕ ಸೇವೆ. 1-6-1975ರಂದು ವೃತ್ತಿ ಜೀವನದಿಂದ ನಿವೃತ್ತಿ. ಅಖಂಡ ಮೂವತ್ತೇಳು ವರ್ಷಗಳ ಸೇವಾ ಸಂತೃಪ್ತಿ.

ಶ್ರೀ ಎರೇಸೀಮೆಯವರೆಂದೂ 'ಬೆಲ್ ಮತ್ತು ಬಿಲ್ಲು'ಗಳ ಶಿಕ್ಷಕರಾಗಿರಲಿಲ್ಲ. ಬೋಧನೆ ಅವರ ದೃಷ್ಟಿಯಲ್ಲಿ ಲಿಂಗಪೂಜೆಯ ಕ್ರಿಯಾಮುಖವಾಯಿತು. ಜೀವನ ಪ್ರೀತಿಯ ಆಡುಂಬೊಲ ವೆನಿಸಿತು. ಸಹಸ್ರ ವಿದ್ಯಾರ್ಥಿಗಳಿಗೆ ಸ್ಫೂರ್ತಿ ನೀಡಿತು. ಶೀಲ ಸಂಪತ್ತಿನ ಸೋಪಾನವಾಯಿತು. ಶ್ರೀಯುತರು ಬಿತ್ತಿದ್ದು ಬೆಳೆದದ್ದು ಕೇವಲ ಅಕ್ಷರಗಳನ್ನಲ್ಲ, ಸಂಸ್ಕೃತಿ ಸಾರವನ್ನು, ದೈವ, ಧರ್ಮಭಕ್ತಿಯನ್ನು, ಗುರು-ಲಿಂಗ ಜಂಗಮ ಪ್ರೇಮವನ್ನು. ನುಡಿಯಲ್ಲಿ ಗಾರುಡಿಗರು, ನಡೆಯಲ್ಲಿ ಶುಭ್ರ ಸಂಪನ್ನರು, ಇಹದಲ್ಲಿ ಮಹವನ್ನು ಆರಾಧಿಸಿದ ಆತ್ಮೀಯರು.

## ಕೃತಿಗಳು

ಶ್ರೀ ಚನ್ನಪ್ಪನವರು ಒಳ್ಳೆಯ ಲೇಖಕರು. ಅವರ ಅನುಭವದಾಳದಿಂದ ಅರಳಿದ ಸ್ವತಂತ್ರ ಕೃತಿಗಳು ಹದಿನೆಂಟಕ್ಕೂ ಹೆಚ್ಚು. ಸಾಹಿತ್ಯ ಕೃಷಿಯಂತೂ ವೈವಿಧ್ಯಪೂರ್ಣ. ವ್ಯಾಕರಣದಿಂದ

ಮೊದಲುಗೊಂಡು ಶರಣಸಾಹಿತ್ಯದವರೆಗೆ ಹರವಾಗಿದೆ. ಜೇನು, ತೆಂಗು, ಅರವಿಂದ, ಸಾಲ ತೀರಿಸಿದ ನಾಯಿ, ಬಸವಣ್ಣನವರ ಕ್ರಾಂತಿ ಕಹಳೆ, ಬಸವಣ್ಣನವರು ಬೋಧಿಸಿದ ಬೋಧೆ, ಬಸವಣ್ಣನವರ ಪಂಚಪುರುಷ, ಅಜಗಣ್ಣ ಮುಕ್ತಾಯಕ್ಕ, ಸಿದ್ಧರಾಮನ ಲಿಂಗತಪಸ್ಸು, ತೋಂಟದ ಸಿದ್ಧಲಿಂಗೇಶ್ವರ, ಸಿದ್ಧಗಂಗಾ ಕ್ಷೇತ್ರದ ಇತಿಹಾಸ ಪರಂಪರೆ, ಚನ್ನಮಲ್ಲಿಕಾರ್ಜುನ, ಉದ್ದಾನ ಶಿವಯೋಗಿ, ಉದ್ದಾನೇಶ ಚರಿತೆ, ರಾಜಶೇಖರ ವಿಳಾಸದ ಗದ್ಯಾನುವಾದ, ಬಸವರಾಜ ವಿಜಯ, ಜಯದೇವ ಮುರುಘರಾಜೇಂದ್ರ ಸ್ವಾಮಿಗಳು - ಇವು ಶ್ರೀಯುತರ ಸೃಜನಶೀಲ ಕೃತಿಗಳು.

ಸಂಪಾದನೆ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಪ್ರಾಮಾಣಿಕ ಶಾಸ್ತ್ರೀಯ ಕಲೆ. ಪಾಂಡಿತ್ಯ ಪ್ರತಿಭೆಗಳ ವಿದ್ಯುದಾಲಿಂಗನವೇ ಸಂಪಾದನಾ ವಿಜ್ಞಾನ. ಶ್ರೀ ಎರೇಸೀಮೆ ಅವರು ಅಂಥ ಮಾರ್ಗವನ್ನನುಸರಿಸಿದ ವಿದ್ವಾಂಸರು. ಶ್ರೀ ದೇವೀರಪ್ಪ ನವರೊಡನೆ ಷಟ್‌ಸ್ಥವಲ್ಲಭ, ಮೂರು ರಗಳೆಗಳು, ಮಹಾನುಭಾವಿ ಚನ್ನಮಲ್ಲಿಕಾರ್ಜುನ ಕೃತಿಗಳನ್ನು, ಶ್ರೀ ಟಿ. ಆರ್. ಮಹಾದೇವಯ್ಯನವರ ಸಂಗಡ "ಸಿದ್ಧಗಂಗಾಶ್ರೀ", ಶ್ರೀ ಟಿ. ಆರ್. ಮಹಾದೇವಯ್ಯ, ಶ್ರೀ ಹೆಚ್. ವಿ. ವೀರಭದ್ರಯ್ಯ, ಶ್ರೀ ಬಿ. ವೀರಭದ್ರಯ್ಯನವರೆಂದಿಗೆ "ದಾಸೋಹಸಿರಿ", ಡಾ. ರಂ. ಶ್ರೀ. ಮುಗಳಿ ಮತ್ತು ಡಾ. ಜಿ.ಎಸ್. ಶಿವರುದ್ರಪ್ಪನವರ ಜೊತೆಗೂಡಿ ಸಾಹಿತ್ಯ ಮಂದಾರ, ಡಾ. ನಂದೀಮಠ ಅವರೊಂದಿಗೆ ಹೊಸಗನ್ನಡ ವ್ಯಾಕರಣ ದರ್ಪಣಗಳನ್ನು ಶಾಸ್ತ್ರ ಶುದ್ಧವಾಗಿ ಸಂಪಾದಿಸಿದ್ದಾರೆ. ಕರ್ನಾಟಕ ಹಾಗೂ ಕೇರಳ ರಾಜ್ಯಗಳ ಕನ್ನಡ ಪಠ್ಯ ಪುಸ್ತಕ ಸಮಿತಿಯಲ್ಲಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದಿಂದ ಪ್ರಕಟವಾದ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಗೆ ಲೇಖನಗಳನ್ನು ನೀಡಿದ್ದಾರೆ. ಭಾರತ ಸರ್ಕಾರದ ಪ್ರಕಟಣಾ ಶಾಖೆಗಾಗಿ ಲೋಕಸಭಾ ಸದಸ್ಯರಾದ ಶ್ರೀ ಎಂ. ಬಸವರಾಜು ಅವರೊಡನೆ 'ಕನಕದಾಸರು' ಕೃತಿ ರಚಿಸಿದ ಹೆಮ್ಮೆ ಶ್ರೀ ಎರೇಸೀಮೆಯವರದು, ಈ ಕೃತಿ ಹಿಂದಿ ಭಾಷಾಂತರವನ್ನೂ ಕಂಡಿದೆ.

ಶ್ರೀ ಪಂಡಿತ ಚನ್ನಪ್ಪನವರು ನಾಡಿನ ಪ್ರೌಢಗ್ರಂಥಗಳಿಗೆ, ವಿಶೇಷ ಸಂಚಿಕೆಗಳಿಗೆ, ನಿಯತಕಾಲಿಕಗಳಿಗೆ ಬರೆದ ವಿವಿಧ ಲೇಖನಗಳು ಅಚ್ಚರಿಗೊಳಿಸುವಷ್ಟು ಹೇರಳವಾಗಿವೆ. 76ಕ್ಕೂ ಹೆಚ್ಚು ವಿದ್ವತ್ಪೂರ್ಣ ಬರಹಗಳು ಸಿದ್ಧಗಂಗಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ, ಶರಣರ ಜೀವನಕ್ಕೆ ಸಂಬಂಧಿಸಿದಂತೆ, ಹಳಗನ್ನಡ ಕಾವ್ಯಗಳನ್ನು ಕುರಿತಂತೆ, ಕನ್ನಡ ಸಂಸ್ಕೃತಿಗೆ ಹೊಂದಿಕೊಂಡಂತೆ ಹರಡಿಕೊಂಡಿವೆ. ಶ್ರೀ ಎರೇಸೀಮೆಯವರ ವ್ಯಾಪಕವಾದ ಮತ್ತು ಆಳವಾದ ಅಧ್ಯಯನಕ್ಕೆ ತೆರೆದುಕೊಂಡ ಸತ್ವಶೀಲ ಲೇಖನಗಳೆಂದು ವಿದ್ವದ್ ಬಂಧುಗಳ ಮೆಚ್ಚುಗೆ ಗಳಿಸಿವೆ.

ಶ್ರೀ ಎರೇಸೀಮೆ ಪ್ರಭಾವೀ ಉಪನ್ಯಾಸಕರು. ಅವರ ಉಪನ್ಯಾಸವೆಂಬುದು ವರ್ಣರಂಜಿತ ಕಾವ್ಯ, ಮಾತು-ಗೀತೆ-ಅಭಿನಯಗಳ ತ್ರಿವೇಣೀ ಸಂಗಮ ಅದು. ಕಥೆ-ಉಪಕಥೆ-ಸ್ವಾನುಭಾವಪ್ರಸಂಗ ನಿರೂಪಣೆ ಸಮಯ ಸ್ಫೂರ್ತಿ ಶ್ರೋತೃಗಳೂ ಪಾತ್ರಗಳಾಗುವಂತೆ ಮಾಡುವ ನೈಪುಣ್ಯತೆ ಚನ್ನಪ್ಪನವರ ಪ್ರವಚನದಲ್ಲಿ ಅರಳುತ್ತದೆ. ಶ್ರೀಯುತರು ನೀಡಿರುವ ದತ್ತಿ ಉಪನ್ಯಾಸಗಳು ವಿಚಾರಪೂರ್ಣ, ದಾಖಲಾತ್ಮಕ. ಕನ್ನಡ ಸಾಹಿತ್ಯ ಪರಿಷತ್, ಕನ್ನಡ ಸಾಹಿತ್ಯ ಅಕಾಡೆಮಿ ವತಿಗಳಿಂದ ನೀಡಿದ ಉಪನ್ಯಾಸಗಳು ಅವಿಸ್ಮರಣೀಯ. ಬೆಂಗಳೂರು ಆಕಾಶವಾಣಿ ಕೇಂದ್ರದಿಂದ ಹದಿನೆಂಟಕ್ಕೂ ಹೆಚ್ಚು ಉಪನ್ಯಾಸಗಳು ಬಿತ್ತರಗೊಂಡಿವೆ. ಸಾರ್ವಜನಿಕ ಪ್ರವಚನ ಕ್ಷೇತ್ರದಲ್ಲಿ ಬಹುದೊಡ್ಡ ಹೆಸರು ಶ್ರೀ ಎರೇಸೀಮೆಯವರದು. 'ಪ್ರವಚನ ಭೀಷ್ಮ' ರೆಂದೇ ಅಭಿಮಾನ ನಾಮರಾಗಿದ್ದಾರೆ. ಚಿತ್ರದುರ್ಗ, ಬೆಂಗಳೂರು, ಸಿದ್ಧಗಂಗಾ, ನೆಲಮಂಗಲ, ಚಿಳ್ಳಗುರ್ಕಿ, ಗುಲ್ಬರ್ಗಾ, ಸೊಲ್ಲಾಪುರ, ಬಿಜಾಪುರ, ಮೈಸೂರು, ಧಾರವಾಡ, ಬೆಳಗಾವಿ, ಕಾದರವಳ್ಳಿ, ತುಮಕೂರು, ಕನಕಪುರ, ತಿಪಟೂರು, ಸಕಲೇಶಪುರ, ಹೊಸಪೇಟೆ, ದೊಡ್ಡಬಳ್ಳಾಪುರ, ತಾಳ್ಯ, ಚನ್ನಪಟ್ಟಣ, ದಾವಣಗೆರೆ, ಪಾವಗಡ, ಹಿರಿಯೂರು, ಕೊರಟಗೆರೆ, ಚಳ್ಳಕೆರೆ ಮುಂತಾದ ಕಡೆಗಳಲ್ಲಿ ಪ್ರವಚನ ನೀಡಿ ಜ್ಞಾನ ದಾಸೋಹಗೈದಿದ್ದಾರೆ.

## ಸನ್ಮಾನ

ಸಮಾಜಕ್ಕಾಗಿ ದುಡಿದ ಶ್ರೀ ಎರೇಸೀಮೆಯವರನ್ನು ಸರ್ಕಾರ, ಸಮಾಜ, ಸಂಘ ಸಂಸ್ಥೆಗಳೂ ಸನ್ಮಾನಿಸಿವೆ. ಗೌರವಿಸಿವೆ. 1992ರಲ್ಲಿ ಕೊಪ್ಪಳದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, 1989ರಲ್ಲಿ ರಾಜ್ಯೋತ್ಸವದಲ್ಲಿ, ಬೆಂಗಳೂರು ಕಾರ್ಪೋರೇಷನ್ ವತಿಯಿಂದ, 1987ರಲ್ಲಿ ಬೆಂಗಳೂರು ಗ್ಲಾಸ್ ಹೌಸಿನಲ್ಲಿ ನಡೆದ ಬಸವಜಯಂತಿ ಸಮಾರಂಭದಲ್ಲಿ, ಮೈಸೂರಿನ ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿವತಿಯಿಂದ, ಬೆಂಗಳೂರು ಬಸವಸಮಿತಿಯಿಂದ, 1988ರಲ್ಲಿ ಆದಿಚುಂಚನಗಿರಿಯಲ್ಲಿ ನಡೆದ ಮಕ್ಕಳ ಸಾಹಿತ್ಯ ಸಮ್ಮೇಳನದಲ್ಲಿ,





1983ರಲ್ಲಿ ಶ್ರೀ ಸಿದ್ಧಗಂಗಾ ಮಠದಲ್ಲಿ ನಡೆದ ಶ್ರೀಗಳವರ ಸುವರ್ಣ ಮಹೋತ್ಸವದಲ್ಲಿ, ಧರ್ಮಸ್ಥಳದಲ್ಲಿ ಶ್ರೀಯುತರು ಪುರಸ್ಕೃತರಾಗಿದ್ದಾರೆ.

ವಿದ್ಯಾ ಇಲಾಖೆಯ ವಿವಿಧ ಸಮಿತಿಗಳಲ್ಲಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಶ್ರೀ ಪಂಡಿತ ಚನ್ನಪ್ಪ ಎರೇಸೀಮೆಯವರು ಶ್ರೀ ಮಠದೊಡನೆ ಬೆಳೆಸಿಕೊಂಡಿರುವ ಬಾಂಧವ್ಯ ಮಾತುಗಳಿಗೆ ಮೀರಿದ್ದು. ಸಂಸ್ಥೆಯ ಧಾರ್ಮಿಕ, ಐತಿಹಾಸಿಕ ಮಾಹಿತಿಯ ಕೋಶವೇ ಅವರಾಗಿದ್ದಾರೆ. ಹಳೆಯ ವಿದ್ಯಾರ್ಥಿ ಸಂಘದ ಸದಸ್ಯರಾಗಿದ್ದಾರೆ. ಸಿದ್ಧಗಂಗಾ ಮಾಸ ಪತ್ರಿಕೆಯ ಸಂಪಾದಕರಾಗಿ, ಪ್ರಧಾನ ಸಂಪಾದಕರಾಗಿ ಮೂವತ್ತು ವರ್ಷಗಳಿಂದಲೂ ಸೇವೆ ಸಲ್ಲಿಸುತ್ತಿದ್ದಾರೆ. ಅಭಿನಂದನಾ ಗ್ರಂಥಗಳ ಸಾರ್ವಭೌಮ ಕೃತಿಯೆಂದೇ ಹೆಸರಾದ 'ಸಿದ್ಧಗಂಗಾಶ್ರೀ'ಯ, ಹಾಗೂ 'ದಾಸೋಹಸಿರಿ'ಯ ಸಂಪಾದಕರಾಗಿ ಶ್ರಮಿಸಿದ ವಿದ್ವಾಂಸರು ಶ್ರೀ ಎರೇಸೀಮೆ ಅವರು. ಇತ್ತೀಚೆಗೆ ಪ್ರಕಟವಾದ ಕನಕಪುರ ಶ್ರೀ ದೇಗುಲ ಮಠದ 'ದೇಗುಲಸಿರಿ'ಯ ಪ್ರಧಾನ ಸಂಪಾದಕರಾಗಿದ್ದಾರೆ. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಆಜೀವ ಸದಸ್ಯರಾಗಿದ್ದಾರೆ. ಪರಮ ಪೂಜ್ಯ ಶ್ರೀ ಶ್ರೀಗಳವರ ಅನುಗ್ರಹಾತ್ಮಕ ಪ್ರೀತಿ ವಾತ್ಸಲ್ಯಗಳ ಭಕ್ತರಾದ ಚನ್ನಪ್ಪನವರು ಸರಳ ಜೀವನಕ್ಕೆ ಉನ್ನತ ಚಿಂತನಕ್ಕೆ ಶ್ರೇಷ್ಠ ಉದಾಹರಣೆ. ●

## ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ ಗ್ರಂಥಭಂಡಾರಕ್ಕೆ ಅಮೂಲ್ಯ ಗ್ರಂಥಗಳ ಕೊಡುಗೆ

ಪಂಡಿತ ಚನ್ನಪ್ಪ ಎರೇಸೀಮೆಯವರು ತಮ್ಮಲ್ಲಿದ್ದ ಅಮೂಲ್ಯ ಹಾಗೂ ವಿಶಿಷ್ಟ ಗ್ರಂಥಗಳೂ ಸೇರಿದಂತೆ ಸುಮಾರು ಮೂವತ್ತು ಸಾವಿರಕ್ಕೂ ಹೆಚ್ಚು ಬೆಲೆಬಾಳುವ ಗ್ರಂಥಗಳನ್ನು ಶ್ರೀಮಠದಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ ಗ್ರಂಥಭಂಡಾರಕ್ಕೆ ದಾನವಾಗಿ ನೀಡಿ ಇತರರಿಗೆ ಮಾರ್ಗದರ್ಶಿಯಾಗಿದ್ದಾರೆ.

ಶ್ರೀಯುತರು ಉದಾರವಾಗಿ ನೀಡಿದ ಕೊಡುಗೆಯನ್ನು 'ಸಿದ್ಧಗಂಗಾ' ಕೃತಜ್ಞತೆಯಿಂದ ಸ್ಮರಿಸುತ್ತದೆ.

### ಮುಖಪುಟ

ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಎಸ್. ಆರ್. ಅಯ್ಯರ್ ಅವರು ಶ್ರೀ ಸಿದ್ಧಗಂಗ ಅಂಧ ಮಕ್ಕಳ ಶಾಲೆಗೆ ಕೊಡುಗೆಯಾಗಿ ನೀಡಿದ ಬ್ರೈಲ್ ಲಿಪಿಯ ಪುಸ್ತಕಗಳು ಹಾಗೂ ಇತರೆ ಉಪಕರಣಗಳನ್ನು ನೀಡಿದ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳರು ಆಶೀರ್ವಚನ ನೀಡುತ್ತಿರುವುದು ಈ ಸಂದರ್ಭದಲ್ಲಿ ಬ್ಯಾಂಕಿನ ಹಿರಿಯ ಅಧಿಕಾರಿಗಳಾದ ಶ್ರೀ ಐ. ಶಿವಸ್ವಾಮಿ, ಶ್ರೀ ಸಿ. ವೈ. ಗುರುಪ್ರಸಾದ್ ಅವರು ಉಪಸ್ಥಿತರಿದ್ದರು.

### ಹಿಂಬದಿ ಪುಟ

ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಇತ್ತೀಚೆಗೆ ನಡೆದ ಕರ್ನಾಟಕದ ತಾಂತ್ರಿಕ ಶಿಕ್ಷಣ ಮಹಾವಿದ್ಯಾಲಯಗಳ ಪ್ರಾಂಶುಪಾಲರ ಸಮ್ಮೇಳನದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ. ಎಸ್. ರಾಜಶೇಖರಯ್ಯ ಅವರನ್ನು ಆರ್ಶೀವದಿಸುತ್ತಿರುವುದು.

ಕರ್ನಾಟಕ ತಾಂತ್ರಿಕ ವಿಶ್ವವಿದ್ಯಾನಿಲಯಗಳ ಪ್ರಾಂಶುಪಾಲರ ಸಮ್ಮೇಳನವನ್ನು ಡಾ. ಎಸ್. ರಾಜಶೇಖರಯ್ಯನವರು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸುತ್ತಿರುವುದು. ಈ ಸಂದರ್ಭದಲ್ಲಿ ಪ್ರೊ. ಬಸವರಾಜಯ್ಯ, ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಪ್ರೊ. ಎಸ್. ಎನ್. ಹೆಗ್ಗಡೆ, ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಪ್ರಾಚಾರ್ಯರಾದ ಡಾ. ಎಂ. ಎನ್. ಚನ್ನಬಸಪ್ಪ ಹಾಗೂ ಗುಲಬರ್ಗಾ ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿ ಡಾ. ಎನ್. ರುದ್ರಯ್ಯ ಅವರು ಉಪಸ್ಥಿತಿರಿದ್ದರು.

# ಪದವಿಪತ್ರಧರರು

-- ಪ್ರೊ. ಡಿ. ಲಿಂಗಯ್ಯ
ನಿವೃತ್ತ ಪ್ರಾಚಾರ್ಯರು
ವಿಶ್ವೇಶ್ವರಪುರಂ ಕಾಲೇಜು,
ಬೆಂಗಳೂರು.

*ಅರ್ಹತೆ ಇಲ್ಲದೆ ವಾಹನ ಚಾಲಕ, ವೈದ್ಯ, ಎಂಜಿನಿಯರ್, ಅಧ್ಯಾಪಕ, ಆಡಳಿತಗಾರ ಅಥವಾ ಯಾವುದೇ ಹುದ್ದೆಯ ನೌಕರನಾದರೆ ಅಂಥವರಿಂದ ಆಗುವ ಅನಾಹುತ ಅಪಾರ. ಇದರಿಂದ ಸಾಮಾಜಿಕ ಜೀವನ ಅಸ್ತವ್ಯಸ್ತವಾಗುತ್ತದೆ; ದೇಶದ ಅಭಿವೃದ್ಧಿ ಕುಂಠಿತವಾಗುತ್ತದೆ. ಇಂಥವರ ಬಗೆಗೆ, ಇಂಥ ಚಟುವಟಿಕೆಗಳ ಬಗೆಗೆ ಎಷ್ಟು ನಿಗ ಇಟ್ಟರೂ ಸಾಲದು. ಇಲ್ಲದಿದ್ದರೆ ಸಾತ್ವಿಕರು, ಪ್ರತಿಭಾವಂತರು ಮೂಲೆ ಗುಂಪಾಗುತ್ತಾರೆ ಎಂಬುದನ್ನು ಕಳೆದ ಅನೇಕ ದಶಕಗಳಿಂದ ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಾ, ಆ ಕ್ಷೇತ್ರದ ಒಳಹೊರಗನ್ನು ಅರ್ಥಮಾಡಿಕೊಂಡಿರುವ ಪ್ರಾಧ್ಯಾಪಕ ಶ್ರೀ ಡಿ. ಲಿಂಗಯ್ಯನವರು ಪ್ರಸ್ತುತ ಲೇಖನದಲ್ಲಿ ಚಿಂತನೆ ಮಾಡಿದ್ದಾರೆ.*

ಭಾರತದಲ್ಲಿ ಕಾಲೇಜುಗಳ ಪರೀಕ್ಷೆ ಗಂಭೀರ ಸಮಸ್ಯೆಯಾಗಿದೆ. ಪರೀಕ್ಷೆಗಳಿಗಿದ್ದ ಪಾವಿತ್ರ್ಯ ದಿನದಿನಕ್ಕೆ ಕುಸಿಯುತ್ತಿದೆ. ವಿಶ್ವವಿದ್ಯಾನಿಲಯದ ಪದವಿಗಳಿಗೆ ಬೆಲೆಯಿಲ್ಲವಾಗುತ್ತಿದೆ. ಒಂದೆರಡು ಅಪವಾದ ಬಿಟ್ಟರೆ ಎಲ್ಲೂ ಪರೀಕ್ಷೆಗಳು ನಿಜವಾದ ಪರೀಕ್ಷೆಗಳಾಗಿ ನಡೆಯುತ್ತಿಲ್ಲ. ಪಬ್ಲಿಕ್ ಪರೀಕ್ಷೆ, ಸಪ್ಲಿಮೆಂಟರಿ ಪರೀಕ್ಷೆ ಎಂದು ವರ್ಷಕ್ಕೆರಡು ಬಾರಿ ಪರೀಕ್ಷೆಗಳ ನಾಟಕ ನಡೆಯುತ್ತದೆ. ಹಲವು ವಿನಾಶಕಾರಕ ಸಮಸ್ಯೆಗಳನ್ನು ತುಂಬಿಕೊಂಡಿರುವ ಪರೀಕ್ಷೆಗಳು ಎಲ್ಲರ ನಿರ್ಲಕ್ಷ್ಯಕ್ಕೆ ತುತ್ತಾಗುತ್ತಿವೆ. ಯಾರೂ ಇದನ್ನು ಗಂಭೀರವಾಗಿ ಪರಿಗಣಿಸುತ್ತಿಲ್ಲ. ಇದು ಹೀಗೆಯೇ ಮುಂದುವರಿದರೆ, ಶಿಕ್ಷಣಕ್ಕೆ, ಪರೀಕ್ಷೆಗೆ, ಪದವಿಗೆ ಏನೇನೂ ಬೆಲೆ ಉಳಿಯುವುದಿಲ್ಲ. ಖೋಟಾ ಪದವೀಧರರ ಸಂಖ್ಯೆ ದಿನದಿನಕ್ಕೆ ಹೆಚ್ಚಾಗುತ್ತಿದೆ. ಈಗಿನ ಪದವೀಧರರಲ್ಲಿ ಅನೇಕರು ಪದವೀಧರರಲ್ಲ; ಕೇವಲ ಪದವಿಪತ್ರಧರರು ಅಷ್ಟೆ. ಆದರೆ ಪದವಿಪತ್ರ ಹೊಂದಿರುವವರನ್ನೆಲ್ಲ ಪದವೀಧರರು ಎನ್ನುವುದಕ್ಕೆ ಕಷ್ಟವಾಗುತ್ತದೆ. ಇಂಥವರು ಪದವಿಪತ್ರದ ಹಕ್ಕಿನಿಂದ, ಸಮಾಜದ ವಿವಿಧ ಹುದ್ದೆಗಳಿಗೆ ನುಗ್ಗುತ್ತಾರೆ. ಇದರಿಂದ ಹಲವು ದುರಪಯೋಗಗಳು ನಡೆಯುತ್ತವೆ; ಸಾಮಾಜಿಕ ಅನಿಷ್ಟಗಳು ಮಿತಿಮೀರಿ ತಾಂಡವವಾಡುತ್ತವೆ ಖೋಟಾತನ ವಿಜೃಂಭಿಸುತ್ತದೆ.

ತಮ್ಮ ಮಕ್ಕಳು ಬುದ್ಧಿವಂತರಾಗಬೇಕು, ವಿದ್ಯಾವಂತರಾಗಬೇಕು, ಸಮಾಜಕ್ಕೆ ಉಪಕಾರಿಗಳಾಗಬೇಕು ಎಂದು ಎಲ್ಲ ತಾಯಿ ತಂದೆಯರೂ ಇಷ್ಟ ಪಡುತ್ತಾರೆ. ಆದರೆ, ಎಷ್ಟು ಜನ ವಿದ್ಯಾರ್ಥಿಗಳು ನಿಜವಾದ ವಿದ್ಯಾರ್ಥಿಗಳಾಗಿ ಅಭ್ಯಾಸದಲ್ಲಿ ತೊಡಗುತ್ತಿದ್ದಾರೆ? ಪರೀಕ್ಷೆಗಳಲ್ಲಿ ಶಿಸ್ತಿನಿಂದ ನಡೆದುಕೊಳ್ಳುತ್ತಿದ್ದಾರೆ? ಓದಿನ ಮೂಲಕ ವಿದ್ಯಾವಂತರಾಗಲು, ಸುಸಂಸ್ಕೃತರಾಗಲು ಬಹಳ ಮಂದಿ ತನ್ಮಯರಾಗುವುದಿಲ್ಲ. ಅನ್ಯ ಚಟುವಟಿಕೆಗಳಿಗೆ ತೊಡಗಿಸಿಕೊಂಡು, ವಿದ್ಯಾರ್ಥಿ ಜೀವನವನ್ನು ಹಾಳುಮಾಡಿಕೊಳ್ಳುತ್ತಿರುವವರ ಸಂಖ್ಯೆಯೇ ಹೆಚ್ಚು. ಇಂಥವರು ಆತ್ಮವಂಚನೆ ಮಾಡಿಕೊಳ್ಳುವುದಲ್ಲದೆ, ತಮ್ಮ ಸಂಸಾರಕ್ಕೂ ಸಮಾಜಕ್ಕೂ ಭಾರವಾಗುತ್ತಾರೆ.

ಶಿಕ್ಷಣದ ಶಿಸ್ತಿಗೆ ಒಳಪಡದಿದ್ದರೂ ಹೇಗಾದರೂ ಮಾಡಿ ಡಿಗ್ರಿ ಪಡೆದುಕೊಳ್ಳುವ ಹುಚ್ಚು ಬಹಳ ಮಂದಿಗಿದೆ. ಲೌಕಿಕ ಲಾಭವೇ ಇದಕ್ಕೆ ಪ್ರೇರಣೆ. ಮನೆಯಿಂದ ಹೊರಟರೂ ತರಗತಿಗಳಿಗೆ ಹಾಜರಾಗದೆ, ಸಮಾಜಬಾಹಿರ ವ್ಯಕ್ತಿಗಳ ಕೈಗೊಂಬೆಗಳಾಗಿ, ದುರ್ವ್ಯಸನಗಳಿಗೆ ಪಕ್ಕಾಗಿ, ಆಶಿಸ್ತನ್ನು ಮೈಗೂಡಿಸಿಕೊಂಡಿರುವವರು ಶಿಕ್ಷಣ ಪದ್ಧತಿಗೆ, ಪಾವಿತ್ರ್ಯಕ್ಕೆ ಸವಾಲಾಗುತ್ತಿದ್ದಾರೆ. ಇಂಥವರು ಓದಿ ಪದವಿ ಪಡೆಯಲು ಸಮರ್ಥರಾಗಿರುವುದಿಲ್ಲ. ಪರೀಕ್ಷೆಗಳಲ್ಲಿ ಕಾಪಿ ಮಾಡುವುದು, ಹೊರಗಡೆಯಿಂದ ಉತ್ತರ ತರಿಸಿಕೊಳ್ಳಲು ವ್ಯವಸ್ಥೆಮಾಡುವುದು, ಅನ್ಯರಿಂದ ಉತ್ತರ ಬರೆಯಿಸುವುದು, ಮೌಲ್ಯಮಾಪನ,





ಟ್ಯಾಬುಲೇಷನ್‌ಗಳಲ್ಲಿ ಅಂಕ ಹಾಕಿಸಿ ಕೊಳ್ಳಲು ಪ್ರಯತ್ನಿಸುವುದು ಮೊದಲಾದ ಅವ್ಯವಹಾರಗಳಲ್ಲಿ ತೊಡಗುತ್ತಾರೆ. ಕೆಲವು ವೇಳೆ ಯಶಸ್ವಿಯೂ ಆಗುತ್ತಾರೆ. ಈ ಹಂತ ತಲುಪುವ ಹೊತ್ತಿಗೆ ಕಾನೂನು ಹುಸಿ ಮನುಷ್ಯತ್ವದ ದಾಸರಾಗಿರುತ್ತಾರೆ. ಅಂತೂ ಪದವಿ ಪತ್ರ ಪಡೆಯುವುದರಲ್ಲಿ ಜಯ ಪಡೆಯುತ್ತಾರೆ. ಈ ಮೂಲಕ ಸಮಾಜದಲ್ಲಿ ವಿದ್ಯಾವಂತರ, ಪದವೀಧರರ ಪಟ್ಟಿಗೆ ಸೇರುತ್ತಾರೆ. ತೇರ್ಗಡೆಯಾಗಲು ಅವ್ಯವಹಾರ ಮಾಡಿದ ವ್ಯಕ್ತಿಗಳು, ಮುಂದೆ ಬದುಕಿನ ಉದ್ದಕ್ಕೂ ಅವ್ಯವಹಾರದಲ್ಲಿ ತೊಡಗುತ್ತಾರೆ. ಪ್ರತಿಭಾವಂತರಿಗೆ ಸಿಗಬೇಕಾದ ಅವಕಾಶಗಳನ್ನು ಅನ್ಯಾಯದ ಮಾರ್ಗದಿಂದ ಕಬಳಿಸುತ್ತಾರೆ.

ವಾಮಮಾರ್ಗದಿಂದ ಪದವಿಪತ್ರ ಗಳಿಸಿದವರನ್ನು ಪತ್ತೆಹಚ್ಚಲು ಆಗಾಗ ಅರ್ಹತಾ ಪರೀಕ್ಷೆಗೆ ಒಳಪಡಿಸಬೇಕು; ಅನರ್ಹತೆ ಕಂಡುಬಂದರೆ ಅವಕಾಶದಿಂದ ಹೊರಗಿಡಬೇಕು. ಇಂಥವರಿಗೆ ಯಾವುದೇ ರೀತಿಯಲ್ಲಿ ಕುಮ್ಮಕ್ಕು ಕೊಡಬಾರದು. ಹೇಗೋ ಒಮ್ಮೆ ಪಡೆದ ಡಿಗ್ರಿ ಜೀವಮಾನವೆಲ್ಲ ಹೊಟ್ಟೆ ಹೊರೆದುಕೊಳ್ಳುವುದಕ್ಕೆ, ಸಮಾಜದಲ್ಲಿ ಸ್ಥಾನಮಾನ ಗಿಟ್ಟಿಸುವುದಕ್ಕೆ ಸಾಧನವಾಗಬಾರದು. ಇಲ್ಲದಿದ್ದರೆ ಖೋಟಾ ಪದವೀಧರ ನಿರ್ಮಾಣ ನಿಲ್ಲುವುದಿಲ್ಲ; ನಿಜವಾದ ಪದವೀಧರರಿಗೆ ಮನ್ನಣೆ ದೊರಕುವುದಿಲ್ಲ.



## ನಿಂಬೆ

'ಸಿ' ಜೀವ ಸತ್ವದ ಆಗರವಾಗಿರುವ ನಿಂಬೆ ಚಿರಪರಿಚಿತ ಹಣ್ಣು. ವ್ಯಾಪಕವಾಗಿ ಕೃಷಿಗೆ ಒಳಗಾಗಿರುವ ನಿಂಬೆಯ ಬೀಜದಿಂದ ಪಡೆದ ಸಸಿಗಳನ್ನು ದೊಡ್ಡ ಕುಂಡಗಳಲ್ಲಿ ಕೂಡ ಬೆಳೆಸಬಹುದು. ಅಥವಾ ಮನೆಯಂಗಳದಲ್ಲಿ ಸಸಿ ಮಾಡಿ ನೆಡಬಹುದು. ಹುಳಿ ರುಚಿ ಹೊಂದಿರುವ ನಿಂಬೆಗೆ ನಿಂಬೂಕ, ಜಂಬೀರ ಮುಂತಾದ ವಿವಿಧ ಹೆಸರುಗಳಿವೆ.

ಹಸಿವನ್ನು ಹೆಚ್ಚಿಸುವ ಗುಣವುಳ್ಳ ನಿಂಬೆ ದೇಹದೆಲ್ಲಾ ವ್ಯವಸ್ಥೆಗಳ ಮೇಲೆ ಪ್ರಭಾವ ಬೀರಬಲ್ಲ ಸಾಮರ್ಥ್ಯ ಹೊಂದಿದ್ದು ರಕ್ತವನ್ನು ವೃದ್ಧಿಸುತ್ತದೆ. ಕೊಬ್ಬನ್ನು ಕರಗಿಸುವ ಶಕ್ತಿಯನ್ನು ಕೂಡ ಹೊಂದಿದೆ.

- ❑ ನಿಂಬೆಯ ರಸವನ್ನು ಜೇನುತುಪ್ಪದೊಂದಿಗೆ ದಿನವೂ ನಿಯಮಿತವಾಗಿ ಸೇವಿಸಿದರೆ ರಕ್ತ ವೃದ್ಧಿಯಾಗುತ್ತದೆ. ಜೇನುತುಪ್ಪದಲ್ಲಿರುವ ಕಬ್ಬಿಣದ ಅಂಶವನ್ನು ರಕ್ತದ ಕಣಕ್ಕೆ ಸೇರಿಸುವ ಶಕ್ತಿ ನಿಂಬೆ ರಸದಲ್ಲಿರುವ 'ಸಿ' ಜೀವಸತ್ವದಲ್ಲಿದೆ.
- ❑ ನಿಂಬೆಯ ರಸ ಮತ್ತು ಜೇನುತುಪ್ಪದ ಮಿಶ್ರಣವನ್ನು ಖಾಲಿ ಹೊಟ್ಟೆಯಲ್ಲಿ ಸೇವಿಸುವುದರಿಂದ, ದೇಹದಲ್ಲಿ ಸಂಗ್ರಹವಾದ ಕೊಬ್ಬಿನಂಶ ಕರಗಿ ದೇಹ ಪ್ರಮಾಣಬದ್ಧವಾಗುತ್ತದೆ.
- ❑ ಕೂದಲಿನ ಹೊಳಪನ್ನು ಹೆಚ್ಚಿಸಲು ಕೃತಕ ರಾಸಾಯನಿಕ ವಸ್ತುಗಳ ಬದಲು ಕೂಡ ನಿಸರ್ಗದತ್ತವಾದ ನಿಂಬೆಯ ರಸವನ್ನು ಬಳಸಬಹುದು. ಸ್ನಾನ ಮಾಡುವ ಸಮಯದಲ್ಲಿ ಕೊನೆಯ ಹಂತದಲ್ಲಿ ಎರಡುತೊಟ್ಟು ನಿಂಬೆರಸವನ್ನು ನೀರಿಗೆ ಹಾಕಿ ತಲೆಯನ್ನು ತೊಳೆದುಕೊಂಡರೆ ಕೂದಲಿಗೆ ಹೊಳಪು ಬರುವುದರೊಂದಿಗೆ ಸ್ವಚ್ಛವಾಗುತ್ತದೆ.
- ❑ ಮುಖದ ಚರ್ಮ ಮೃದುವಾಗಿ ಹೊಳಪು ಬರಲು ಒಂದು ಚಮಚ ನಿಂಬೆ ರಸಕ್ಕೆ ಒಂದು ಚಮಚ ಹಾಲಿನ ಕೆನೆ ಸೇರಿಸಿ ಮುಖಕ್ಕೆ ಹಚ್ಚಿಕೊಳ್ಳಬೇಕು.
- ❑ ನಿಂಬೆಯ ರಸಕ್ಕೆ ಉಪ್ಪು ಸೇರಿಸಿ, ಹಲ್ಲು ಹಾಗೂ ವಸಡುಗಳನ್ನು ಮೃದುವಾಗಿ ಉಜ್ಜುವುದರಿಂದ ಹಲ್ಲು ಮತ್ತು ಒಸಡು ಶುದ್ಧಿಯಾಗುತ್ತದೆ.
- ❑ ಅರಿಶಿನದೊಂದಿಗೆ ನಿಂಬೆ ಎಲೆಯನ್ನು ಸೇರಿಸಿ ಅರೆದು ಮುಖಕ್ಕೆ ಹಚ್ಚಿಕೊಳ್ಳುವುದರಿಂದ ಮೊಡವೆಗಳು ನಿವಾರಣೆಯಾಗುತ್ತದೆ.

# ಶ್ರೀ ರಾಮಕೃಷ್ಣ ಪರಮಹಂಸರ ದೃಷ್ಟಿಯಲ್ಲಿ ಸ್ತ್ರೀ

-- ಕವಿತಾಕೃಷ್ಣ

ಶ್ರೀ ರಾಮಕೃಷ್ಣ ಪರಮಹಂಸರು ಸರ್ವಧರ್ಮ ಸಮನ್ವಯದ ನೇತಾರರಾಗಿ ಯೋಗಿಗಳಿಗೆ ಯೋಗಿಗಳಾಗಿ, ಸಾಧಕರಿಗೆ ಮಾರ್ಗದರ್ಶಿಗಳಾಗಿ ಸಮಾಜದ ಒಳಿತಿಗಾಗಿ ತಮ್ಮ ಜೀವನವನ್ನು ಮುಡುಪಾಗಿಟ್ಟ ದಾರ್ಶನಿಕರು. ಸ್ತ್ರೀಯರಲ್ಲಿ ಜಗನ್ಮಾತೆಯನ್ನು ಕಂಡ ಮಹಾನ್ ಭಕ್ತರು. ಕೈ ಹಿಡಿದ ಧರ್ಮ ಪತ್ನಿಯನ್ನು ಮಾತೆಯನ್ನಾಗಿ ಪೂಜಿಸಿ ಗೌರವಿಸಿದ ಮಹಾಪುರುಷ.

ಸರ್ವಧರ್ಮ ಸಮನ್ವಯಾಚಾರ್ಯರಾದ ಶ್ರೀ ರಾಮಕೃಷ್ಣ ಪರಮಹಂಸರು ಯೋಗಿಗಳಿಗೆ ಯೋಗಿಗಳಾಗಿ, ಸಾಧಕರಿಗೆ ಮಾರ್ಗದರ್ಶಿಗಳಾಗಿ, ಜ್ಞಾನಿಗಳಿಗೆ ಜ್ಞಾನಿಗಳಾಗಿ, ಅಷ್ಟೇಕೆ ಉತ್ತಮ-ಅಧಮ ಎಂಬ ಜಾತಿಭೇದವಿಲ್ಲದೆ, ಸ್ತ್ರೀ-ಪುರುಷರೆಂಬ ಲಿಂಗಭೇದ ಮಾಡದೆ, ಪುರುಷರಲ್ಲಿ ಕಂಡ ದೈವ ಭಾವವನ್ನೇ ಸ್ತ್ರೀಯರಲ್ಲೂ ಕಂಡು ಅವರನ್ನು ಮಾತೆಯೆಂದು ಪೂಜಿಸಿ ಗೌರವಿಸಿದ ಮಹಾನ್ ದ್ರಷ್ಟಾರರಾಗಿದ್ದರು. ಸಾಮಾನ್ಯವಾಗಿ ಸಂನ್ಯಾಸಿಗಳು ಕಾಂಚನವನ್ನು ತುಚ್ಛೀಕರಿಸಿ ಕಾಣುವಂತೆ ಕಾಮಿನಿ (ಸ್ತ್ರೀ)ಯನ್ನೂ ಹಾಗೇ ತುಚ್ಛೀಕರಿಸಿ ನೋಡುತ್ತಾರೆ. ಆದರೆ ಶ್ರೀ ಪರಮಹಂಸರಾದರೋ ಅವರನ್ನು ಜಗನ್ಮಾತೆ ಎಂದು ಸಾರಿ, ಅವರನ್ನು ಮಾತೃಸ್ಥಾನದಲ್ಲಿಟ್ಟು ಪೂಜಿಸಿ ಗೌರವಿಸಿದ್ದಾರೆ. ಅಂದರೆ ಅವರ ದೃಷ್ಟಿಯಲ್ಲಿ ಕಾಮಿನಿ ತ್ಯಾಗವೆಂದರೆ ಸ್ತ್ರೀ ತಿರಸ್ಕಾರವಲ್ಲ. ಕಾಮ ಮೂಲವಾದ ಮೋಹದ ತ್ಯಾಗ ಎಂದಷ್ಟೇ ಅರ್ಥ. ಆದುದರಿಂದಲೇ ಅವರು ಸ್ತ್ರೀಯರನ್ನು ಮಾತೆಯರೆಂದು ಗೌರವಿಸಿ ಪುರಸ್ಕರಿಸಿದ್ದು, ಅವರಲ್ಲಿ ಮಾತೃ ಸ್ವರೂಪ ಕಂಡು ಧನ್ಯರಾದದ್ದು. ಒಟ್ಟಾರೆ 'ಸ್ತ್ರೀ'ಯು ಸಂನ್ಯಾಸ ಜೀವನದಲ್ಲಿ ಅತ್ಯಗತ್ಯವೆಂದು ತೋರಿಕೊಟ್ಟರು. ಅವರು ಕೈಹಿಡಿದ ಸೌಭಾಗ್ಯವತಿಯನ್ನು ಮಾತೆಯಾಗಿ ಆರಾಧಿಸಿದರು. ಹೆಣ್ಣಾದ ಭೈರವೀ ಬ್ರಾಹ್ಮಣಿಯನ್ನು ಗುರುವಾಗಿ ಸ್ವೀಕರಿಸಿದರು. ಜೋಗಿನ್ ಮಾ, ಗೋಲಾಸ್‌ಮಾ, ಗೌರಿದಾಸಿ, ಅಘೋರ ಮಣಿದೇವಿ ಮುಂತಾದ ಸ್ತ್ರೀಯರನ್ನು ಪ್ರಿಯ ಶಿಷ್ಯರಾಗಿ ಸ್ವೀಕರಿಸಿದರು. ಒಟ್ಟಾರೆ ಪರಮಹಂಸರು ಸ್ತ್ರೀಯರನ್ನು ಪೂಜ್ಯ ಭಾವದಿಂದಲೇ ಕಂಡವರು.

## ಜಗನ್ಮಾತೆ

ಶ್ರೀ ರಾಮಕೃಷ್ಣ ಪರಮಹಂಸರು ಉತ್ತಮೋತ್ತಮರಾದ ಭಾವಸಾಧಕರು. ಅವರಿಗೆ ದಾಸ್ಯಭಾವ, ಸಖ್ಯಭಾವಗಳ ಸಾಧನೆಯಲ್ಲಿ ಇದ್ದ ನಿಷ್ಠೆಯ ಮಧುರ ಭಾವದ ಸಾಧನೆಯಲ್ಲೂ ಇತ್ತು. ಶ್ರೀ ಕೃಷ್ಣನನ್ನು ಪ್ರತ್ಯಕ್ಷ ಮಾಡಿಕೊಂಡ ಅವರು ರಾಧೆಯ ಭಾವವನ್ನು ತಮ್ಮಲ್ಲಿ ಆರೋಪಿಸಿಕೊಂಡು ಹೆಂಗಸರಂತೆ ಉಡುಗೆ-ತೊಡುಗೆಗಳನ್ನು ತೊಟ್ಟು, ರಾಧೆಯ ಅಪರಾವತಾರವೇ ಆದರು. ನಡೆ-ನುಡಿಯಲ್ಲಿ ಸ್ತ್ರೀಯಂತೆ ಮೈ-ಮನ ತಳೆದು ಭಕ್ತಿ ಸಾಗರದಲ್ಲಿ ಮುಳುಗಿದರು. ಇದನ್ನು ಅರಿತ ಮಹಿಳಾಮಣಿಗಳು ಸ್ವಾಮೀಜಿಯವರೊಡನೆ ಬೆರೆಯಲು ನಾಚಿಕೆಯೇ ಪಡಲಿಲ್ಲ. (ಹೆಂಗಳೆಯರೊಡನೆ ಬೆರೆಯುವಂತೆ ಸುಲಲಿತವಾಗಿ ಅವರೊಡನೆ ಬೆರೆಯುತ್ತಿದ್ದರು). ಬಾಹ್ಯಕ್ಕೆ ರಾಧೆಯಾಗಿ ಅಂತರಂಗದಲ್ಲಿ ಮಹಾಜ್ಞಾನಿಯಾಗಿರುವ ಅವರ ಮಹಾನ್ ಗುಣಕ್ಕೆ ಸ್ತ್ರೀ ಕೋಟಿಯೇ ಅವರ ಚರಣಗಳಲ್ಲಿ ಶರಣಾಗತಿಯನ್ನು ಹೊಂದಿತು.

ಕಾಮಿನಿ ತಿರಸ್ಕಾರವೆಂದರೆ ಅವರ ದೃಷ್ಟಿಯಲ್ಲಿ ಕೇವಲ 'ಕಾಮ'ಕ್ಕೆ ತಿರಸ್ಕಾರವಷ್ಟೇ! ಸ್ತ್ರೀಯನ್ನು ಮಾತ್ರ ಜಗನ್ಮಾತೆಯಾಗಿ ಕಾಣು ಎಂದು ಅವರು ಉಪದೇಶ ನೀಡಿದರು. ಅವರು ಲತೆಯಂತೆ ಬಳಕುವ, ಸೌಂದರ್ಯದ ಕಡಲಲ್ಲಿ ಮೂರ್ತಿವೆತ್ತ ತಮ್ಮ ಮಡದಿ ಶ್ರೀಮಾತೆ ಶಾರದಾದೇವಿಯನ್ನು ಕಾಮದ ಕಣ್ಣಿನಿಂದ ನೋಡದೆ ಜ್ಞಾನದ ಕಣ್ಣಿನಿಂದ ನೋಡಿ ಮಾತೆಯಾಗಿ ಸ್ವೀಕರಿಸಿದರು. ಕಾಮದ ಬೊಂಬೆಯಾಗಿ ಕಾಣದೆ ಜಗನ್ಮಾತೆಯಾಗಿ ಕಂಡರು. ತಾವು ಮುಟ್ಟಬೇಕಾದ ಗುರಿ ಮುಟ್ಟಲು ಅತಿ ಸಹಕಾರಿಯಾಗಿ ಮಾಡಿಕೊಂಡರು. ಮಡದಿಯನ್ನು ಮಾತೆಯಾಗಿ ಕಂಡು ಪೂಜಿಸಿದರು. ಸ್ತ್ರೀ ಸಮೂಹಕ್ಕೆ ಅಸಮಾನ್ಯವಾದ ಗೌರವ ಪುರಸ್ಕಾರಗಳನ್ನು ಸಮಾಜದಲ್ಲಿ ಸಿಗುವಂತೆ ಮಾಡಿದರು.





## ಜ್ಞಾನದ ಕಣ್ಣು

ಪರಮಹಂಸರಿಗೆ ಒಮ್ಮೊಮ್ಮೆ ತಾನು ಸಾಧಕನೋ ಅಲ್ಲವೋ ಎಂಬ ಸಂದೇಹ ಉಂಟಾಗುತ್ತಿತ್ತು. ಆಗ ಅವರ ಸಾಧನೆ ಸಿದ್ಧಿಗೆ ಅಡಚಣೆ ಉಂಟಾಗಿ, ಅವರ ಮನಸ್ಸು ಬಿರುಗಾಳಿಗೆ ಸಿಕ್ಕ ದೋಣಿಯಂತಾಗುತ್ತಿತ್ತು. ಇಂತಹ ಸಮಯದಲ್ಲಿ ಅವರ ಸಂದೇಹವನ್ನು ದೂಡಿ, ಅವರ ಸಾಧನೆ ಸಿದ್ಧಿಗೆ ಸೋಪಾನವಾಗಿ, ಅವರು ಮಹಾನ್ ಸಂನ್ಯಾಸಿಯಾಗಿ ನಂದಾದೀವಿಗೆಯಾಗಲು ನೆರವಾದವರೆಂದರೆ ಓರ್ವ ಹೆಣ್ಣು. ಆಕೆಯೇ ಭೈರವೀ ಬ್ರಾಹ್ಮಣಿ. ಈಕೆ ಪರಮಹಂಸರಿಗೆ ಮಾರ್ಗದರ್ಶಿ ಮಾತ್ರವಲ್ಲ; ಮೊದಲ ಗುರುವೂ ಆದಳು.

ಭೈರವೀ ಬ್ರಾಹ್ಮಣಿ ವಂಗದೇಶದ ಕುಲೀನ ಮಹಿಳೆ. ವೈದಿಕ ಮನೆತನದವಳು. ವೈಷ್ಣವ ಸಂಪ್ರದಾಯದ ಮಹಾನ್ ವಿದ್ಯಾವತಿಯಾದ ಈಕೆ ಭಕ್ತಿಶಾಸ್ತ್ರದಲ್ಲಿ ಅಪಾರವಾದ ಪಾಂಡಿತ್ಯ ಪಡೆದಿದ್ದಳು. ವಯಸ್ಸು ಕಿರಿದಾಗಿದ್ದರೂ ಅಪಾರವಾದ ಜ್ಞಾನವನ್ನು ಗಳಿಸಿದ್ದಳು. ಸಹಜ ಸೌಂದರ್ಯ ಅವಳ ಮುಖದಲ್ಲಿ ತುಂಬಿ ತುಳುಕಾಡುತ್ತಿತ್ತೋ ಜ್ಞಾನ ಸೌಂದರ್ಯವೋ ಅಂತೆಯೇ ಪ್ರಕಾಶಿಸುತ್ತಿತ್ತು. ಆಕೆಯ ಒಳಗಣ್ಣಿಗೆ ಪರಮಹಂಸರ ವ್ಯಕ್ತಿತ್ವ ಗೋಚರವಾಗಿ, ಸೀಮಾ ಪುರುಷನ ದರುಶನಕ್ಕೆಂದು ತಾನೇ ಓಡೋಡಿ ಬಂದಳು. ಸ್ವಾಮೀಜಿ ಆಕೆಯ ತೇಜಸ್ಸನ್ನು ಕಂಡು 'ಬಾ ತಾಯಿ ಬಾ' ಎಂದು ಸ್ವಾಗತಿಸಿದರು. ಅವಳ ಜ್ಞಾನದ ಪ್ರಕಾಶವನ್ನು ಕಂಡು ಒಳಗಣ್ಣು ಸಂಪೂರ್ಣವಾಗಿ ತೆರೆದರು. ಜನತೆ ಹುಚ್ಚನೆಂದು ಕರೆಯುವಾಗ ಆಕೆ ಅವರ ಸಾಧನೆ-ಸಿದ್ಧಿಗಳನ್ನು ಕಂಡು, ದಿವ್ಯಾವಸ್ಥೆ ಹೊಂದಿದ 'ಮಹಾಭಾವ'ವನ್ನು ನೀನು ಕರಗತ ಮಾಡಿಕೊಂಡಿರುವೆ ಬಾಬಾ... ನೀನು ಈ ಹಾದಿಯಲ್ಲೇ ಮುನ್ನಡೆ ಎಂದಳು. ಸ್ವಾಮೀಜಿ ಆಕೆಯನ್ನು ಗುರುವಾಗಿ ಸ್ವೀಕರಿಸಿದರು.

ಪರಮಹಂಸರಿಗೆ ಒಮ್ಮೆ ಮೈಯೆಲ್ಲ ಸುಡಲಾರಂಭಿಸಿತು. ಬೇಗೆಯಿಂದ ಬಳಲಿ, ಕಂದಿ ಕುಂದಿಹೋದರು. ಆಗ ಭೈರವೀ ಬ್ರಾಹ್ಮಣಿಯು ಮಾತೃವಾತ್ಸಲ್ಯದಿಂದ ಸ್ವಾಮೀಜಿಯವರ ಸೇವೆ ಮಾಡಿದಳು. ಕೂಡಲೇ ಗಂಗಾಸ್ನಾನ ಮಾಡಿಸಿ, ಶ್ರೀಗಂಧಲೇಪನ ಮಾಡಿ, ಹೂಮಾಲೆ ಹಾಕಿದಳು. ಕೂಡಲೇ ಅನೇಕ ವೈದ್ಯರಿಂದ ವಾಸಿಯಾಗದಿದ್ದ ರೋಗ ನಿವಾರಣೆಯಾಯಿತು. ಅಷ್ಟೇ ಅಲ್ಲ; ಅವರಲ್ಲಿ ಮನೆ ಮಾಡಿದ್ದ ಅನೇಕ ಸಂದೇಹಗಳು ಆಕೆಯ ಉತ್ತರದಿಂದ ಬಗೆಹರಿದವು. ಆಗ ಸ್ವಾಮೀಜಿಗೆ "ಸ್ತ್ರೀಯೆ ನಿಜವಾದ ವೈದ್ಯಳು" ಎನಿಸಿತು. ಸ್ತ್ರೀಯನ್ನು ಕುರಿತು "ಮಾತೃದೇವೋಭವ" ಎಂದವರು "ಗುರುದೇವೋ ಭವ" ಎಂದು ಗೌರವಿಸಿದರು.

ಹೀಗೆ ಪರಮಪಾವನ ಮೂರ್ತಿ ಶ್ರೀ ರಾಮಕೃಷ್ಣ ಪರಮಹಂಸರು ಋಷಿಜೀವನದ ತಳಹದಿಯ ಮೇಲೆ ಭವ್ಯವಾದ ಆಧ್ಯಾತ್ಮ ಸೌಧ ಕಟ್ಟಿ, ಸ್ತ್ರೀಯನ್ನು ಶ್ರೀಮಾತೆಯಾಗಿ ಕೂರಿಸಿ, ಜ್ಞಾನಜ್ಯೋತಿಯನ್ನು ಜಗತ್ತಿಗೆಲ್ಲಾ ಸಾರಿದರು.

---

ಕಾಯಕದಲ್ಲಿ ನಿರತನಾದರೆ,  
ಗುರುದರ್ಶನವಾದರೂ ಮರೆಯಬೇಕು,  
ಲಿಂಗಪೂಜೆಯಾದರೂ ಮರೆಯಬೇಕು,  
ಜಂಗಮ ಮುಂದಿದ್ದರೂ ಹಂಗು ಹರಿಯಬೇಕು,  
ಕಾಯಕವೇ ಕೈಲಾಸವಾದ ಕಾರಣ  
ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು.

-- ಲಕ್ಕಮ್ಮ

ಮರೆದವರ ಮನದಲೆಲ್ಲವೂ ಮಾರಿ  
ಅರಿದವರ ಮನದಲೆಲ್ಲವೂ ಸ್ವಯಂಜ್ಯೋತಿ  
ಡಕ್ಕೆಯ ದನಿ ಉಳ್ಳನ್ನಕ್ಕ ನಿಶ್ಚೈಸಿಕೊಳ್ಳಿ  
ಕಾಲಾಂತಕ ಭೀಮೇಶ್ವರ ಲಿಂಗವನರಿವುದಕ್ಕೆ.

-- ಡಕ್ಕೆಯ ಬೊಮ್ಮಣ್ಣ

ಅಸಂಖ್ಯಾತ ಒಳ್ಳೆ ಗುಣಗಳಿದ್ದಾಗ ಒಂದು ದೋಷವಿದ್ದರೆ ಅದು ಹಾನಿಕರವಿಲ್ಲ. ಆ ಗುಣರಾಶಿಯಲ್ಲಿ ಅದು ಹುಳುಗಿ ಹೋಗಿರುತ್ತದೆ. ಚಂದ್ರನ ಕಿರಣಗಳಲ್ಲಿ ಅವನ ಕಲಂಕಕ್ಕೆ ಅಷ್ಟು ಮಹತ್ವವಿಲ್ಲ. ಕಾರಣ ಬಡತನದಿಂದ ಸದ್ಗುಣಗಳೆಲ್ಲ ಹಾಳಾಗಿ ಹೋಗುವುವು ಎಂಬ ಕವಿಯ ಹೇಳಿಕೆ ಯುಕ್ತವಲ್ಲ.

-- ಷಟ್‌ನೀತಿ

ತಮ್ಮ ಯೋಗ್ಯತೆಯಿಂದ ಹೆಸರು ಗಳಿಸುವವರು ಶ್ರೇಷ್ಠರು. ತಂದೆಯಿಂದ ತಮ್ಮ ಕೀರ್ತಿಯನ್ನು ಮುಂದುಮಾಡುವವರು ಸಾಮಾನ್ಯರು. ತಮ್ಮ ಸೋದರಮಾವನ ಘನತೆಯಿಂದ ಜೀವಿಸುವವರು ಕೀಳು ಜನ.

-- ಶಾರ್ಙ್ಗಧರ

# ಹೊಂಗೆ ಮರ

-- ಎಚ್. ಎಸ್. ಸಿದ್ಧಗಂಗಪ್ಪ
53/1, ಶಿವಕೃಪ, ಮೊದಲನೆ ಮುಖ್ಯರಸ್ತೆ,
ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ,
ವಿಜಯನಗರ, ಬೆಂಗಳೂರು

*ಹೊಂಗೆ ಮರವನ್ನು 'ಕಲ್ಪವೃಕ್ಷ' ಎಂದು ಕರೆಯಲಾಗುತ್ತಿದೆ. ಬಹುಪಯೋಗಿಯಾದ ಈ ಮರದಿಂದ ಹಸಿರೆಲೆ ಗೊಬ್ಬರ ದೊರೆಯುತ್ತದೆ. ಹೊಂಗೆ ಬೀಜಗಳಿಂದ ತೆಗೆಯುವ ಎಣ್ಣೆಯಿಂದ ದೀಪ ಉರಿಸಲು, ಸಾಬೂನು, ಮೇಣದ ಬತ್ತಿ ತಯಾರಿಸಲು, ಕೆಲವು ರೋಗಗಳಿಗೆ ಉಪಯುಕ್ತ ಔಷಧಿ ತಯಾರಿಸಲು ಬಳಸುತ್ತಾರೆ. ಸುಲಭವಾಗಿ ಕಡಿಮೆ ವೆಚ್ಚದಲ್ಲಿ ಬೆಳೆಸಬಹುದಾದ ಈ ಮರಗಳಿಂದ ಹೆಚ್ಚು ಉಪಯೋಗವನ್ನು ಪಡೆಯಬಹುದು.*

ದಕ್ಷಿಣ ಕರ್ನಾಟಕದ ಬೆಂಗಳೂರು, ತುಮಕೂರು ಹಾಗೂ ಕೋಲಾರ ಜಿಲ್ಲೆಗಳಲ್ಲಿ ಹೆಚ್ಚಾಗಿ ಹೊಲದ ಬದುಗಳಲ್ಲಿ, ಹೊಳೆ, ಹಳ್ಳದ ದಂಡೆಗಳಲ್ಲಿ, ಮರಳು ದಿಣ್ಣೆಗಳ ಮೇಲೆ ಹೊಂಗೆ ಮರಗಳನ್ನು ಕಾಣಬಹುದು. ಹಚ್ಚ ಹಸಿರಿನಿಂದ ಕೂಡಿರುವ ಈ ಮರ ತೇವಾಂಶದಿಂದ ಕೂಡಿದ ಮೆಕ್ಕಲು ಮಣ್ಣಿನಲ್ಲಿ ಹೆಚ್ಚಾಗಿ ಹಾಗೂ ಚೆನ್ನಾಗಿ ಬೆಳೆಯುತ್ತದೆ. ಶೀಘ್ರವಾಗಿ ಬೆಳೆಯುವ ಗುಣವನ್ನು ಹೊಂದಿರುವ ಈ ಮರ 'ಲೆಗೂಮ್' ಜಾತಿ ಸಸ್ಯ ವರ್ಗಕ್ಕೆ ಸೇರಿದೆ. ಈ ಮರ 8 ರಿಂದ 10 ವರ್ಷಗಳಲ್ಲಿ 8 ರಿಂದ 9 ಮೀಟರ್ ಎತ್ತರ ಬೆಳೆಯುತ್ತದೆ. ಹೆಚ್ಚಾಗಿ ಮಳೆ ಬೀಳುವ ಪ್ರದೇಶಗಳಲ್ಲಿ ಈ ಮರ ಸಾಮಾನ್ಯವಾಗಿ ಬೆಳೆಯುವುದಿಲ್ಲ. ಹೊಂಗೆ ಮರ ಸಾಮಾನ್ಯವಾಗಿ 80 ರಿಂದ 100 ವರ್ಷಗಳವರೆಗೆ ಜೀವಿಸುತ್ತದೆ. ಇದನ್ನು ತಜ್ಞರು ನಮ್ಮ ರಾಜ್ಯದ 'ಕಲ್ಪವೃಕ್ಷ,' ವೆಂದು ಕರೆದಿದ್ದಾರೆ. ಮರದ ತೊಗಟೆಯು ಬೂದು ಬಣ್ಣದಾಗಿದ್ದು ತೊಗಟೆಯನ್ನು ಬೇರ್ಪಡಿಸಿದಾಗ ಹಳದಿ ಬಣ್ಣವಾಗುತ್ತದೆ.

## ಬೆಳೆಸುವ ವಿಧಾನ

ಬಹುಪಯೋಗಿಯಾದ ಹೊಂಗೆ ಮರಗಳನ್ನು ಬೆಳೆಸಲು ಹೆಚ್ಚು ವೆಚ್ಚ ಮಾಡಬೇಕಿಲ್ಲ. ತೊರೆ ಹಳ್ಳದ ದಂಡೆಗಳಲ್ಲಿ, ಮಳೆ ನೀರಿನಲ್ಲಿ ಕೊಚ್ಚಿ ಬಂದ ಬೀಜಗಳಿಗೆ ಸೂಕ್ತ ಸ್ಥಳ ದೊರೆತಾಗ ಅವು ಅಲ್ಲಿಯೇ ಮೊಳೆತು ಗಿಡವಾಗಿ ಬೆಳೆಯುತ್ತವೆ. ಹೊಲದ ಬದುಗಳಲ್ಲಿ ಅಲ್ಲಲ್ಲಿ ಗುಣಿ ಮಾಡಿ ಸ್ವಲ್ಪ ಗೊಬ್ಬರ ಹಾಕಿ ಬೀಜಗಳನ್ನು ನೆಟ್ಟು ಗಿಡಗಳನ್ನು ಬೆಳೆಯಬಹುದು. 100 ಬೀಜಗಳನ್ನು ಹಾಕಿದರೆ ಅವುಗಳಲ್ಲಿ ಸುಮಾರು 80 ಬೀಜಗಳಾದರೂ ಮೊಳೆಯುತ್ತವೆ. ಅಲ್ಲದೆ ಹೊಂಗೆ ಬೀಜಗಳನ್ನು ಮಡಿಕೆಗಳಲ್ಲಿ ನೆಟ್ಟು ಸಸಿ ಬೆಳೆಸಬಹುದು.

ಸಸಿಗಳನ್ನು ಹೆಚ್ಚಾಗಿ ಬೆಳೆಸಿ ನಾಟಿ ಹಾಕಬೇಕಾದಾಗ ಒಟ್ಲು ಪಾತಿಯಲ್ಲಿ ಬೆಳೆಸಬೇಕು. ಮಣ್ಣು ಹಗುರವಾಗಿ ನೀರು ಬಸಿಯುವಂತೆ ಮಾಡುವ ದೃಷ್ಟಿಯಿಂದ 1:1:1ರ ಪ್ರಮಾಣದಲ್ಲಿ ಕೊಟ್ಟಿಗೆ ಗೊಬ್ಬರ, ಮರಳು ಮತ್ತು ಕೆಂಪು ಮಣ್ಣನ್ನು ಬೆರೆಸಬೇಕು. ಬೀಜವನ್ನು ಒಟ್ಲು ಪಾತಿಯಲ್ಲಿ ಹಾಕಿ, ಮಣ್ಣಿನಿಂದ ತೆಳುವಾಗಿ ಮುಚ್ಚಬೇಕು. ನೀರನ್ನು ತೇವ ಆರದಂತೆ ತೆಳುವಾಗಿ ಸಿಂಪಡಿಸಬೇಕು. ಬೀಜವು 10 ರಿಂದ 30 ದಿನಗಳಲ್ಲಿ ಮೊಳಕೆಯಾಗುತ್ತದೆ. ಒಂದು ವರ್ಷದವರೆಗೂ ಸಸಿಗಳನ್ನು ಪಾತಿಗಳಲ್ಲಿ ಬೆಳೆಸಿ ನಂತರ ಕಿತ್ತು ಬೇರೆ ಕಡೆ ನೆಡುವುದು ಗಿಡದ ಆರೋಗ್ಯಕರವಾದ ಬೆಳವಣಿಗೆಯ ದೃಷ್ಟಿಯಿಂದ ಉತ್ತಮ. ಸಸಿಗಳನ್ನು ಪಾತಿಗಳಲ್ಲಿ ಬೆಳೆಸುವುದಲ್ಲದೆ ಪಾಲಿತೀನ್ ಚೀಲಗಳಲ್ಲಿಯೂ ಬೆಳೆಸಬಹುದು. ಅದಕ್ಕೆ 1:2:3 ಪ್ರಮಾಣದಲ್ಲಿ ಕೊಟ್ಟಿಗೆ ಗೊಬ್ಬರ, ಮರಳು ಮತ್ತು ಕೆಂಪು ಮಣ್ಣನ್ನು ಮಿಶ್ರಣ ಮಾಡಿ ಪಾಲಿತೀನ್ ಚೀಲಗಳಲ್ಲಿ ತುಂಬಬೇಕು. ನಂತರ ಬೀಜಗಳನ್ನು ಚೀಲಗಳಲ್ಲಿ ನೆಟ್ಟು ಕ್ರಮವಾಗಿ ಹದವರಿತು ನೀರನ್ನು ಹಾಕುತ್ತಿರಬೇಕು. ಹೀಗೆ ಒಂದು ವರ್ಷದವರಿಗೂ





ಸಸಿಗಳನ್ನು ಆರೈಕೆ ಮಾಡಿ ಮಳೆಗಾಲದಲ್ಲಿ ನೆಡಬಹುದು.

## ಬೀಜಗಳ ಆಯ್ಕೆ

ಸಸಿ ಮಾಡಲು ಉತ್ತಮ ಗುಣಮಟ್ಟದ ಬೀಜಗಳನ್ನು ಬಳಸಬೇಕು. ಚೆನ್ನಾಗಿ ಬಲಿತ ಕಾಯಿಗಳನ್ನು ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿ ಬೀಜಕ್ಕೆ ಪೆಟ್ಟಾಗದಂತೆ ಕಾಯಿಯಿಂದ ಬೇರ್ಪಡಿಸಿ, ಪ್ರತಿ ಗುಣಿಯಲ್ಲಿಯೂ 2 ರಿಂದ 3 ಬೀಜಗಳನ್ನು ನೆಡಬೇಕು. ಬೀಜವು ಮೊಳೆತು ಸಸಿಯಾದ ನಂತರ ಚೆನ್ನಾಗಿ ಬೆಳೆದ ಸಸಿಯನ್ನು ಹೊರತುಪಡಿಸಿ ಉಳಿದ ಸಸಿಗಳನ್ನು ಕಿತ್ತು ಹಾಕಿ ಉತ್ತಮ ಸಸಿಯನ್ನು ಪಡೆಯಬಹುದು.

## ಗಿಡಗಳ ಆರೈಕೆ

ಗಿಡವು ಚೆನ್ನಾಗಿ ಬೆಳೆಯುವಂತೆ ಮಾಡಲು ಗಿಡಗಳ ಬುಡದಲ್ಲಿ ಬೆಳೆದ ಇತರೆ ಗಿಡ ಗೆಂಡೆಗಳನ್ನು ಕಾಲಕಾಲಕ್ಕೆ ಕಿತ್ತು ಹಾಕಬೇಕು. ಇಲ್ಲವೆ ಕತ್ತರಿಸಿ ಹಾಕಬೇಕು. ಅಲ್ಲದೆ ಗಿಡಗಳ ಸುತ್ತಲೂ ಮಣ್ಣನ್ನು ಅಗೆಯಬೇಕು. ಹೀಗೆ ಮಾಡುವುದರಿಂದ ತೇವಾಂಶವು ಹೆಚ್ಚು ಕಾಲ ಇರುವಂತೆ ಮಾಡಬಹುದು. ಹೀಗೆ ಮಾಡುವುದರಿಂದ ಗಿಡವು ಚೆನ್ನಾಗಿ ಬೆಳೆಯುತ್ತದೆ.

## ಬೆಳೆಸುವ ವಿಧಾನ

ಗಿಡಗಳನ್ನು ಹೊಲದ ಬದುಗಳಲ್ಲಿ ಸ್ಥಳಾವಕಾಶವನ್ನು ನೋಡಿಕೊಂಡು ಬೆಳೆಸಬಹುದು. ಸಾಲು ಮರಗಳಾಗಿ ಬೆಳೆಸುವುದಾದರೆ ಬೀಜ ಅಥವಾ ಸಸಿಗಳನ್ನು 7.5 ರಿಂದ 9 ಮೀಟರ್ ಅಂತರದಲ್ಲಿ ನೆಡಬೇಕು. ಅಲ್ಲದೆ ರಸ್ತೆ, ಸಾಲು ಚರಂಡಿ ಬದಿಯಲ್ಲಿ ಕೆರೆ ಅಂಗಳ ಮುಂತಾದ ಕಡೆಗಳಲ್ಲಿ ಸಸಿಗಳನ್ನು ನೆಡಬಹುದು. ಇದರಿಂದ ಮರಗಳು ಸೊಂಪಾಗಿ ಬೆಳೆಯುತ್ತವೆ. ಮರಗಳು ನೇರವಾಗಿ ಎತ್ತರವಾಗಿ ಬೆಳೆಯುವಂತೆ ಮಾಡಲು ಆಗಿಂದಾಗ್ಗೆ ಪಕ್ಕದ ರೆಂಬೆಗಳನ್ನು ಸವರುತ್ತಿರಬೇಕು.

## ಉಪಯೋಗ

ಬಹುಪಯೋಗಿಯಾದ ಹೊಂಗೆ ಮರ ಬೇಸಿಗೆಯ ಬಿಸಿಲಿನ ಧಗೆಯಲ್ಲಿ ತಂಪನ್ನು ನೀಡುತ್ತದೆ. ಗ್ರಾಮೀಣ ಜನ ಬೇಸಿಗೆಯಲ್ಲಿ ಬಿಲಿಸಿನ ಝಳವನ್ನು ತಾಳಲಾರದೆ, ಹೊಂಗೆ ಮರದ ನೆರಳನ್ನು ಆಶ್ರಯಿಸುವುದೂ ಉಂಟು. ಮರದ ನೆರಳು ಅಷ್ಟೊಂದು ತಂಪು. ತಂಪಾದ ಗಾಳಿ ಮನಸ್ಸಿಗೆ ಮುದವನ್ನು ನೀಡುತ್ತದೆ. ಈ ಮರದ ಎಲೆಗಳು ಉತ್ತಮವಾದ ಹಸಿರು ಎಲೆ ಗೊಬ್ಬರವನ್ನು ಒದಗಿಸುತ್ತವೆ. ಇದರ ಸೊಪ್ಪು ಬೇಗನೆ ಕೊಳೆಯುತ್ತದೆ. ಗದ್ದೆ, ತೋಟಗಳಿಗೆ ಹೊಂಗೆ ಸೊಪ್ಪು ಒಂದು ಉತ್ತಮವಾದ ಹಸಿರು ಎಲೆ ಗೊಬ್ಬರವಾಗಿ ಉಪಯೋಗಿಸಲಾಗುತ್ತಿದೆ. ಒಂದು ಸಾಧಾರಣ ಮರದಿಂದ ವರ್ಷಕ್ಕೆ 180-235 ಕೆ.ಜಿ. ಎಲೆ ಹಾಗೂ ಕಡ್ಡಿಗಳು ದೊರೆಯುತ್ತವೆ. ಹೊಂಗೆ ಮರದ ಎಲೆಗಳಷ್ಟೇ ಅಲ್ಲ, ಹೂವು ಸಹ ಉತ್ತಮ ಪೌಷ್ಟಿಕಾಂಶವುಳ್ಳ ಗೊಬ್ಬರ. ಈ ಗೊಬ್ಬರವನ್ನು ಹಾಕುವುದರಿಂದ ಉತ್ತಮ ಬೆಳೆಯನ್ನು ತೆಗೆಯಬಹುದು. ತೋಟದ ಬೆಳೆಗಳಿಗೆ, ಕಬ್ಬು, ತರಕಾರಿ, ಗದ್ದೆ, ಮೆಣಸಿನಕಾಯಿಗಿಡ, ಇತ್ಯಾದಿಗಳಿಗೆ ಈ ಗೊಬ್ಬರವನ್ನು ಉಪಯೋಗಿಸುತ್ತಾರೆ.

ಹೊಂಗೆ ಬೀಜಗಳಿಂದ ಎಣ್ಣೆ ತೆಗೆಯುತ್ತಾರೆ. ಈ ಎಣ್ಣೆಯನ್ನು ದೀಪ ಉರಿಸಲು, ಚರ್ಮ ಹದ ಮಾಡಲು, ಸಾಬೂನು, ಮೇಣದ ಬತ್ತಿ ತಯಾರಿಸಲು ಬಳಸಲಾಗುತ್ತಿದೆ.

## ಔಷಧಿಗಾಗಿ

ಹೊಂಗೆ ಎಣ್ಣೆಯಲ್ಲಿ ಔಷಧಿಯ ಗುಣಗಳಿವೆ. ಈ ಎಣ್ಣೆಯನ್ನು ಸಂಧಿವಾತ, ಚರ್ಮದ ಕಾಯಿಲೆಗಳಿಗೆ ಉಪಯೋಗಿಸುತ್ತಾರೆ. ಗಾಯಗಳಿಗೆ ಹೊಂಗೆ ಎಲೆಗಳನ್ನು ಎಣ್ಣೆಯಲ್ಲಿ ಅದ್ದಿ ಪಟ್ಟು ಕಟ್ಟುತ್ತಾರೆ. ಎಲೆಯ ರಸವನ್ನು ಕಜ್ಜಿಗೆ, ಎಳೆಯ ಎಲೆಯನ್ನು ಮೂಲ ವ್ಯಾಧಿಗೆ ಔಷಧಿ ತಯಾರಿಸಲು ಉಪಯೋಗಿಸುತ್ತಾರೆ.

## ಉತ್ತಮ ಗೊಬ್ಬರ

ಬೀಜದಿಂದ ಎಣ್ಣೆ ತೆಗೆದು ನಂತರ ಉಳಿದ ಹಿಂಡಿಯನ್ನು ಬೆಳೆಗಳಿಗೆ ಗೊಬ್ಬರವಾಗಿ ಉಪಯೋಗಿಸುತ್ತಾರೆ. ಸಸ್ಯಗಳ ಬೆಳವಣಿಗೆಗೆ ಬೇಕಾಗುವ ಉತ್ತಮ ಪೌಷ್ಟಿಕಾಂಶವನ್ನು ಹಿಂಡಿ ಗೊಬ್ಬರ ಒದಗಿಸುತ್ತದೆ. ಇದು ಸಸ್ಯಗಳನ್ನು ನಾಶ ಮಾಡುವ ಇರುವೆಗಳನ್ನು ದೂರ ಇಡುತ್ತದೆ. ಅಲ್ಲದೆ ಮರದಿಂದ ಕೃಷಿ ಉಪಕರಣಗಳು ಹಾಗೂ ಚಾಚಣಿಗೆಗಳನ್ನು ತಯಾರಿಸಲು ಉಪಯೋಗಿಸುತ್ತಾರೆ.

ಹೊಂಗೆಯ ಮರದ ಬೇರುಗಳಲ್ಲಿ ಸೂಕ್ಷ್ಮಜೀವಾಣುಗಳು ವಾತಾವರಣದಿಂದ ಸಾರಜನಕವನ್ನು ಶೇಖರಿಸುತ್ತದೆ. ಇದರಿಂದ ಮಣ್ಣಿನ ಫಲವತ್ತತೆ ಹೆಚ್ಚುತ್ತದೆ. ಈ ಮರವನ್ನು ಶ್ರೀಗಂಧದ ಮರದ ಜೊತೆಗೆ ಬೆಳೆಸುವುದರಿಂದ ಶ್ರೀಗಂಧ ಮರಕ್ಕೆ ಬರುವ ಎಲೆ ಕೃಷಿ ರೋಗವನ್ನು ತಡೆಗಟ್ಟಬಹುದು.

## ಕಡಿಮೆ ಹಣ ಖರ್ಚುಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಿರಿ.

- ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚು ಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುದು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತ ವಾಗಿರುವುದರಿಂದ ನಿಮ್ಮ ಉಡುಪುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

**ಕಸ್ತೂರಿ ಸಾಬೂನುಗಳನ್ನು ಇಂದೇ ಉಪಯೋಗಿಸಿರಿ**

'ಕಸ್ತೂರಿ'
ನೀಲಂ ಬಾರ್ ಸೋಪ್

'ಕಸ್ತೂರಿ'
ನೀಲಂ ಬಾರ್ ಸೋಪ್

**ರಾಮಕೃಷ್ಣ ಆಯಿಲ್ ಮಿಲ್, ತುಮಕೂರು**

## ಆರಾಧ್ಯ ಅಂಡ್ ಆರಾಧ್ಯ ಬಿಲ್ಡರ್ಸ್ ಪ್ರೈ. ಲಿಮಿಟೆಡ್

21/2, ಆರಾಧ್ಯ ಕಾಂಪ್ಲೆಕ್ಸ್,
ವಾಣಿವಿಲಾಸ ರಸ್ತೆ,
ಬೆಂಗಳೂರು-560 004.

ದೂರವಾಣಿ :
ಕಛೇರಿ : 623773
ಮನೆ : 262455





*ಹಾರ್ದಿಕ ಶುಭಾಶಯಗಳೊಂದಿಗೆ* (ಸ್ಥಾಪನೆ : 1982)

## ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿಯಮಿತ

ಎಸ್.ಐ.ಟಿ. ಕ್ಯಾಂಪಸ್, ತುಮಕೂರು-572 103

| | | |
|---|---|---|
| ಸದಸ್ಯರ ಸಂಖ್ಯೆ | : | 1072 |
| ಷೇರು ಮೊಬಲಗು | : | ರೂ. 16,03,400.00 |
| ವಾರ್ಷಿಕ ವಹಿವಾಟು | : | ರೂ. 1.8 ಕೋಟಿ |
| ಖಾಯಂ ಠೇವಣಿ ಮೇಲಿನ ಬಡ್ಡಿ | : | 46 ದಿನಗಳಿಂದ 1 ವರ್ಷಕ್ಕೆ 12.5% |
| | : | 1 ವರ್ಷದಿಂದ 2 ವರ್ಷಕ್ಕೆ 13.5% |
| | : | 2 ವರ್ಷದಿಂದ 3 ವರ್ಷಕ್ಕೆ 15.0% |
| | : | 3 ವರ್ಷಕ್ಕೆ ಮೇಲ್ಪಟ್ಟು 16.0% |
| ಸದಸ್ಯರುಗಳಿಗೆ ಸಾಲದ ಸೌಲಭ್ಯ | : | ರೂ. 50,000.00 ಗಳವರೆಗೆ |

ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು - ಗೌರವಾಧ್ಯಕ್ಷರು

ಪ್ರೊ. ಬಿ. ಗಂಗಾಧರಯ್ಯ ಅಧ್ಯಕ್ಷರು ಶ್ರೀ ಎಸ್. ವಿಶ್ವನಾಥಯ್ಯ ಉಪಾಧ್ಯಕ್ಷರು

*ಶುಭಾಶಯಗಳೊಂದಿಗೆ*

ಸ್ಥಾಪನೆ : 1995 ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ ದೂರವಾಣಿ : 77267

## ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಬಿ. ಹೆಚ್. ರಸ್ತೆ, ತುಮಕೂರು - 572102

**ಪ್ರಗತಿ ನೋಟ** (31-1-1998ರಲ್ಲಿದ್ದಂತೆ)

ಸದಸ್ಯರ ಸಂಖ್ಯೆ -2861 (ಲಕ್ಷ ರೂ.ಗಳಲ್ಲಿ)

| | | | |
|---|---|---|---|
| ಅಧಿಕೃತ ಷೇರು ಬಂಡವಾಳ | 50.00 | ಠೇವಣಿಗಳು | 719.15 |
| ಪಾವತಿಯಾದ ಷೇರು ಬಂಡವಾಳ | 46.94 | ಚಾಲ್ತಿ ಬಂಡವಾಳ | 776.91 |
| ಕಾಯ್ದಿರಿಸದ ನಿಧಿಗಳು | 10.82 | ಸಾಲಗಳು | 496.63 |

***ನಿಶ್ಚಿತ ಠೇವಣಿಗಳ ಮೇಲೆ ನೀಡುವ ಬಡ್ಡಿ ದರ (9.5.1998 ರಿಂದ)***

| | | | |
|---|---|---|---|
| 30 ದಿವಸದಿಂದ 180 ದಿನಗಳವರೆಗೆ | - 10% | 181ದಿವಸಗಳಿಂದ 1 ವರ್ಷದವರೆಗೆ | - 11% |
| 1 ವರ್ಷದಿಂದ 2 ವರ್ಷಗಳವರೆಗೆ | - 12% | 2 ವರ್ಷದಿಂದ ಮೇಲ್ಪಟ್ಟು | - 13% |
| ಉಳಿತಾಯ ಖಾತೆ | - 5.5% | | |

**ಶ್ರೀ ಟಿ. ಕೆ. ನಂಜುಂಡಪ್ಪ** ಅಧ್ಯಕ್ಷರು **ಶ್ರೀ ಕೆ. ಎಸ್. ಶಂಕರಯ್ಯ** ಉಪಾಧ್ಯಕ್ಷರು **ನಟರಾಜು** ವ್ಯವಸ್ಥಾಪಕರು

***Printed at : Geetanjali Printers, Bangalore-54***

